


# ರೀತಿ ರಿವಾಜ್

ಲೇಖಕರು :
ಶ್ರೀಮತಿ ರಮಾ ಬ್ಯಾ
ಯಾನೆ ಅಮ್ಮಣ

*With Best Compliments From :*



# Kusum
## Catering Services

Vimal Nivas, Urva Chilimbi,
MANGALORE - 575 006.

*CATERING SERVICES FOR :*

Marriages, Conferences, Grahapraveshams,
Upanayanas & all other occasions specialists
South Indian, Chinese & Continental Cuisine

: Contact :

**Mr. SHAILESH BHAT J.**
Phone : 2425287 / 2496069 (O), 2454069 (R)
Mobile : 98440 - 54069

*At Economical Rates*

# ರೀತಿ - ರಿವಾಜ್

ಬರೆದವರು :

ಶ್ರೀಮತಿ ರಮಾ ಬ್ಯಾ. ಯಾನೆ. ಅಮ್ಮಣ

ಪ್ರಕಾಶಕರು :

ಬಸ್ತಿ ಕೊಗ್ಗಣ್ಣ ಶೆಣ್ಯೆ



## ಅನುಕ್ರಮ :-



ಶ್ರೀ ಮಹಾಲಸಾ ದೇವಿ

## ಶ್ರೀ ಮಹಾಲಸಾ ನಾರಾಯಣಿ ದೇವಿ

ತುಝ್ಯಾ ಚರಣಿ ಲೊಳೆನ ಲೊಳೆನ । ಮಹಾಲಸಾ । ನಾರಾಯಣಿ ॥
ಕರೀ ದೀನಾವರಿ ಕೃಪೇಚಿ ಚ್ಛಾಯಾ ॥ ತುಝ್ಯಾ ಚರಣಿ ॥
ತುಝ್ಯಿ ಚರಣ ಮಾತಿ । ತಿಚಿ ಭಾಗಿರಥಿ ॥
ಚುಕವಿತೊ । ಆಮುಚಿ ಪುನಾರಾವೃತ್ತಿ ॥ ತುಝ್ಯಾ ಚರಣಿ ॥
ಅನಂತಪರಾಧ । ಪದರಿಗಾಲೂನ ॥ ಶರಣಾಗಂತಾಸಿ । ಕರೀಪಾಲನ ।
ಅಂತರಿದೇಹಿ । ಅಖಂಡಪ್ರೇಮ । ವಾಚ್ಛೇಸಿದೇತು ಜೇಗೊಡನಾಮ ॥
ಮಾರ್ಡೊಲ ಪುರವಾಸಿನಿ । ಶ್ರೀ ಮಹಾಲಸಾ ನಾರಾಯಣಿ ॥
ತ್ರಿಕಾಲ । ತ್ರಿವಿಧ ಸ್ವರೂಪಿಣಿ ತ್ರಿವಿಧ ತಾಪನಿವಾರಿಣಿ ॥ ತುಝ್ಯಾ ಚರಣಿ ॥
ಭಕ್ತಾಂಸಿ ಕರಿತಿ ರಕ್ಷಣ ದುಷ್ಟಾಂ ಸಿ ಕರಿತಿ ಮರ್ಧನ
ಕಾಯ ವರ್ಣ ತುಝ್ಯಿ । ನಿಜ ಶಾಂತಿಧೀನ ದಯಾಳು ತೂ ಆಮುಚ ಆಯು
ದೇಹಿ ಮಲಾ ತುಝ್ಯಿ ದರುಶನ । ಗೇಯಿ ಮಲಾ ತುಝ್ಯಾ ಚರಣಿ ಮೊಳವೂನ ॥ ತುಝ್ಯಾ ಚರಣಿ ॥
ತುಝ್ಯಿ ಚರಣ ದಾಸಿ ರಮಾ ಆನಿ ಸರ್ವೈ ಜನ ॥
ಪ್ರೇಮ ಭಾವೆ ತುಲಾ ॥ ಸಾಂಷ್ಟಾಂಗ ನಮನ ॥ ತುಝ್ಯಾ ಚರಣ ॥
ಲೊಳೆನ ಲೊಳೆನ ಮಹಾಲಸಾ । ನಾರಾಯಣಿ ಲೊಳೆನ ಲೊಳೆನ । ಶ್ರೀ ಶ್ರೀ ಶ್ರೀ

## ಶ್ರೀರಾಮನಾಥ ಶಾಂತೇರಿ ಕಾಮಾಕ್ಷಿ ಸ್ತೋತ್ರಮ್

ಅನಾಧಿನಾಥ ಶ್ರೀನಾಥ ದೀನನಾಥ ದಯಾನಿಧೆ ।
ಸಿದ್ಧಿನಾಥ ವಿಶ್ವನಾಥ ರಾಮನಾಥ ನಮೋಸ್ತುತೇ ॥
ಲಕ್ಷ್ಮೀನಾರಾಯಣಶ್ಚಾದೌ ಪುರತೊ ನಂದಿಕೇಶ್ವರಃ ।
ಕಾಮಾಕ್ಷೀ ದಕ್ಷಿಣೆ ಯಸ್ಯ ಶಾಂತೇರಿ ಯಸ್ಯ ವಾಮತಃ ॥
ಅನ್ಯತ್ರ ಪುರುಷಾಃ ಸವ್ಯೆ ವೇತಾಲಃ ಕಾಲಭೈರವಃ ।
ರಾಮೇಶ್ವರಂ ರಾಮಾನಾಥಂ ತಂ ವಂದೇ ಕುಲದೈವತಂ ॥
ರಾಮೇಶ್ವರ ನಮಸ್ತುಭ್ಯಂ ಶರಣಾಗತ ವತ್ಸಲ ।
ಮಹಾರುದ್ರ ನಮಸ್ತುಭ್ಯಂ ಕಮನೀಯ ಗುಣಾಶ್ರಯ ॥
ರಾಮನಾಥ ನಮಸ್ತುಭ್ಯಂ ಸರ್ವಕಾಮಾರ್ಥ ಸಾಧಕ ।
ಮಮ ಸಿದ್ಧಿಮಸಿದ್ಧಿಂ ವಾ ಸ್ವಪ್ನೇ ಸರ್ವ ಪ್ರದರ್ಶಯ ॥

# ಲೇಖಕರ ಹಿತವಚನ

## ಪ್ರತಿಯೊಬ್ಬ ಹಿಂದುವೂ ಗಮನಿಸಬೇಕಾದ ಕೆಲವು ವಿಷಯಗಳು

1. ಮನೆಯ ಒಳಗು-ಹೊರಗುಗಳು ನಿತ್ಯ ನಿರ್ಮಲವಾಗಿರಬೇಕು. ಮನೆಯ ಮುಂದೆ ತುಳಸಿಯ ಕಟ್ಟೆಯಿರಬೇಕು.

2. ಪ್ರತಿದಿನ ಪರಿವಾರ ಸಮೇತರಾಗಿ ಇಷ್ಟದೇವತೆಯ ಭಜನೆ, ಆರಾಧನೆ ನಡೆಸಬೇಕು. ಹಬ್ಬ ಹರಿದಿನಗಳನ್ನು ಅರ್ಥಪೂರ್ಣವಾಗಿ ಆಚರಿಸಬೇಕು.

3. ಹಿರಿಯರು ಕಿರಿಯರ ಮೇಲೆ ಪ್ರೀತಿ ವಾತ್ಸಲ್ಯಗಳನ್ನು ತೋರಬೇಕು. ಕಿರಿಯರು ಹಿರಿಯರನ್ನು ಗೌರವದಿಂದ ಕಾಣಬೇಕು, ಇಂಥ ಸದ್ಭಾವನೆ, ಸದಾಚಾರಗಳು ನೆಲೆಗೊಳ್ಳುವ ವಾತಾವರಣವನ್ನು ಹಿರಿಯರು ಸೃಷ್ಟಿಸಬೇಕು.

4. ಮನೆಗೆ ಬಂದ ಅಥಿತಿಗಳನ್ನು ಪ್ರೀತಿ ಗೌರವಗಳಿಂದ ಸತ್ಕರಿಸಬೇಕು. ಮೇಲು ಕೀಳೆಂಬ ತಾರತಮ್ಯ ಸಲ್ಲದು.

5. ನೆರೆಹೊರೆಯವರೊಡನೆ ಸ್ನೇಹ-ಸಹಕಾರದಿಂದ ಇದ್ದು ಸಂತೋಷದ ವಾತಾವರಣ ನಿರ್ಮಿಸಬೇಕು.

6. ಕಳವು, ಹಿಂಸೆ, ವಂಚನೆ, ಆಸೂಯೆ, ಸಿಟ್ಟು, ದುಸ್ವಾರ್ಥ ಮುಂತಾದ ದುರ್ಗುಣ, ದುರ್ವ್ಯಸನಗಳನ್ನು ವರ್ಜಿಸಿ, ನೇರವಾದ ನಡೆ-ನುಡಿ, ಸತ್ಯ. ಧರ್ಮ ಮಾರ್ಗಗಳನ್ನು ಅನುಸರಿಸಿ ನಡೆಯಬೇಕು.

7. ಸುಖ-ದುಃಖಗಳು, ಲಾಭ-ನಷ್ಟಗಳು, ಹಿತ-ಅಹಿತಗಳು ಸರ್ವರಿಗೂ ಸಮಾನವೆಂದು ತಿಳಿದು ಎಲ್ಲರೊಡನೆ ವ್ಯವಹರಿಸಬೇಕು.

ಶ್ರೀಮತಿ ರಮಾ ಬ್ಯಾ.

ಓಂ
ಶ್ರೀ ಕುಲದೇವತಾಯ ನಮಃ
ಶ್ರೀ ಗಣೇಶಾಯ ನಮಃ
ಶ್ರೀ ಶ್ರೀ ಗುರುಭ್ಯೋ ನಮಃ

# ಮುನ್ನುಡಿ

ಸಮಾಜ ಸೇವೆಯಲ್ಲೇ ತನ್ನನ್ನು ತೊಡಗಿಸಿಕೊಂಡ ಶ್ರೀಮತಿ ರಮಾಬಾಯಿಯವರು ಜನಿಸಿದ್ದು 1916ರಲ್ಲಿ. "ಬೆಳೆಯ ಸಿರಿ ಮೊಳಕೆಯಲ್ಲಿ" ಎಂಬಂತೆ ಬಾಲ್ಯದಲ್ಲೇ ಅವರ ಪ್ರೌಢಿಮೆ ವ್ಯಕ್ತವಾಗುತ್ತಿತ್ತು.

ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾಗಿ ಮಂಜೇಶ್ವರದಲ್ಲಿ ಅಜ್ಜಿಯ ಆಶ್ರಯದಲ್ಲಿ ಬೆಳೆದರು. ಹುಟ್ಟಿದಾಗ ತೊಟ್ಟಿಲಲ್ಲಿ ನಾಮಕರಣವಾಗದೆ ಎಲ್ಲರೂ ಪ್ರೀತಿಯಿಂದ "ಅಮ್ಮಣ್ಣಿ" ಎಂದೇ ಕರೆಯುತ್ತಿದ್ದರು. ಮುಂದೆ ಐದು ವರ್ಷ ಪ್ರಾಯವಾದಾಗ ಮುಲ್ಕಿಯ ವೆಂಕಟ್ರಮಣನ ಸನ್ನಿದಾನದಲ್ಲಿ "ರಮಾ" ಎಂದು ನಾಮಕರಣವಾಯಿತು.

ಮುಂದೆ ತನ್ನ ಮಾತೃ ಸಂಸ್ಥೆಯಾದ ಕೆನರಾ ಹೈಸ್ಕೂಲಿನಲ್ಲಿ ಕಲಿಕೆಯ ಜೊತೆಗೆ ಆಟಪಾಠಗಳಲ್ಲಿ ಪಠ್ಯೇತರ ಚಟುವಟಿಕೆಗಳಲ್ಲಿ, ಎಲ್ಲರಿಗಿಂತ ಮುಂದಾಗಿ ಶಾಲೆಗೇ ಕೀರ್ತಿ ತಂದವರು ಇವರು. ತಂದೆ ವೈದ್ಯರಾಗಿದ್ದುದರಿಂದ ಅವರ ಕೆಲಸದಲ್ಲಿ ಸಹಾಯಕರಾಗಿದ್ದು, ಅವರಿಂದ ಮನೆಮದ್ದು, ರೋಗಿಗಳ ಶುಶ್ರೂಷಾ ವಿಧಾನಗಳನ್ನು ಅರಿತುಕೊಂಡು ಅಸ್ವಸ್ಥದಿಂದ ನರಳುವವರಿಗೆ ನೆರವಾಗುತ್ತಿದ್ದರು. ಆರೈಕೆ ಮಾಡುವುದರಲ್ಲಿ ಎತ್ತಿದ ಕೈ ಅವರದ್ದು.

ಅವರ ಅಕ್ಕನ ಕುಟುಂಬ ಬಹಳ ದೊಡ್ಡದಾಗಿದ್ದುದರಿಂದ ಅಲ್ಲಿ ಆಗಾಗ ಹಬ್ಬಹರಿದಿನಗಳು, ಮದುವೆ, ಮುಂಜಿ ಇತ್ಯಾದಿಗಳೆಲ್ಲಾ ನಡೆಯುತ್ತಿದ್ದವು. ಅವುಗಳನ್ನೆಲ್ಲಾ ನೋಡಿ ಅಭ್ಯಸಿಸಿ ರೀತಿ ರಿವಾಜಿಗಳನ್ನು ಅರಿತುಕೊಂಡರು.

ಅವರಿಗೆ ತನ್ನ ಗುರು, ದೇಶ, ಧರ್ಮ, ಸಮಾಜ ಇವೆಲ್ಲದರಲ್ಲೂ ಅಪಾರವಾದ ಶ್ರದ್ಧೆ ಹಾಗೂ ಪ್ರೀತಿ

ಪ್ರಾತಃ ಕಾಲದಲ್ಲಿ ಎದ್ದು, ತಣ್ಣೀರು ಸ್ನಾನಮಾಡಿ, ಸಂಧ್ಯಾವಂದನೆ, ದೇವರ ಭಜನೆ ಮುಗಿಸಿದ ಅನಂತರವೇ ಉಪಾಹಾರ ಯಾರು ಯಾವುದೇ ನೆರವು ಕೇಳಿದರೂ ಇಲ್ಲವೆನ್ನುತ್ತಿರಲಿಲ್ಲ. ಅಗತ್ಯಬಿದ್ದರೆ ಅವರ ಮನೆಗೇ ಹೋಗಿ ಎಲ್ಲಾ ವಿವರಗಳನ್ನೂ ತಿಳಿಸಿ ಬರುತ್ತಿದ್ದರು. ಮದುವೆ, ಮುಂಜಿಗಳಲ್ಲಿ ಮಂಟಪಕ್ಕೆ ಹೋಗಿ ಎಲ್ಲಾ ಸಿದ್ಧತೆಗಳನ್ನು ಮಾಡಿ

ಬರುತ್ತಿದ್ದುದರಿಂದ ವೈದಿಕರು "ಅಮ್ಮಣ್ಣ ಮಾಯಿ" ಇದ್ದರೆ ನಮ್ಮ ಕೆಲಸ ಅರ್ಧದಷ್ಟು ಮುಗಿದಂತೆಯೇ ಸರಿ" ಎಂದು ಅವರನ್ನು ಹಾಡಿ ಕೊಂಡಾಡುತ್ತಿದ್ದರು.

ಅವರು ಕ್ರಿ.ಶ. 1968ರಲ್ಲಿ ಕಾರಣಾಂತರದಿಂದ ತಮ್ಮ ಬಾಡಿಗೆ ಮನೆಯನ್ನು ಬಿಟ್ಟು ಬಿಜೈಯಲ್ಲಿರುವ ತಮ್ಮ ಮಗಳ ಮನೆಗೆ ಬಂದು ನೆಲೆಸಿದರು. ಅಲ್ಲಿ ಅವರಿಗೆ ಮನೆಯ ಜವಾಬ್ದಾರಿ ಇಲ್ಲದಿದ್ದುದರಿಂದ ತುಂಬಾ ಬಿಡುವು ಸಿಗುತ್ತಿತ್ತು. ಮೊದಲೇ ಬರೆಯುವುದೆಂದರೆ ಬಹಳ ಪ್ರೀತಿ ಈಗಂತೂ ಅದನ್ನೇ ತಮ್ಮ ಹವ್ಯಾಸವಾಗಿ ಬೆಳೆಸತೊಡಗಿದರು. ನಮ್ಮ ಸಮಾಜ ಪಾಶ್ಚಾತ್ಯ ಸಂಸ್ಕೃತಿಗೆ ಮಾರುಹೋಗಿ ಪೌರ್ವಾತ್ಯ ಸಂಸ್ಕೃತಿಯನ್ನೇ ಮರೆಯುತ್ತಿರುವುದು ಅವರಿಗೆ ತುಂಬಾ ದುಃಖವನ್ನುಂಟು ಮಾಡುತ್ತಿತ್ತು. ಅದಕ್ಕಾಗಿ ಅವರು "ರೀತಿ-ರಿವಾಜ್" ಎಂಬ ಪುಸ್ತಕವನ್ನು ಬರೆದರು. ಇಂದಿನ ನಮ್ಮ ಈ ಸಮಾಜಕ್ಕೆ ಈ ಪುಸ್ತಕವು "ದಾರಿದೀಪವಾಗಲಿ" ಎಂಬುದೇ ಅವರ ಮಹತ್ವಾಕಾಂಕ್ಷೆಯಾಗಿತ್ತು.

ರಮಾಬಾಯಿಯವರಿಗೆ ಭಜನೆ, ರಾಮನಾಮ ಬರೆಯುವುದೆಂದರೆ ಎಲ್ಲಿಲ್ಲದ ಸಂತೋಷ. ಹಾಗೆಯೇ ಅಪ್ಪನಿಂದ ಕಲಿತ "ಮನೆಮದ್ದು" ಅಕ್ಕನ ಮನೆಯಲ್ಲಿ ನೋಡಿ ಮಾಡಿ ಕರತಲಾಮಲಕ ಮಾಡಿಕೊಂಡ ಮದುವೆ, ಮುಂಜಿ, ನಾಂದಿ, ನಿಶ್ಚಯ ತಾಂಬೂಲ, ಮದುವೆ ಮಂಟಪ, ಗೃಹಪ್ರವೇಶ, ಹಬ್ಬಹರಿದಿನ, ಷಷ್ಠ್ಯಬ್ದಿ, ಹುಟ್ಟುಹಬ್ಬ ಇತ್ಯಾದಿ ಹಲವಾರು ಕಾರ್ಯಕ್ರಮಗಳ ತಯಾರಿಯ ಬಗ್ಗೆ ಸವಿವರವಾಗಿ, ಅಚ್ಚುಕಟ್ಟಾಗಿ ಒಂದು ಪುಸ್ತಕದಲ್ಲಿ ಬರೆದು, ಅವುಗಳ ಮೂರು ಪ್ರತಿಗಳನ್ನು ತೆಗೆದರು. ಪರೋಪಕಾರಾಯ ಮಿದಂ ಶರೀರಂ ಎಂಬ ಆರ್ಯೋಕ್ತಿಯಂತೆ ಸಮಾಜಕ್ಕೆ ತನ್ನ ಕೈಲಾದ ಸೇವಾ ಸಹಾಯವನ್ನು ಮಾಡಬೇಕೆಂದು ಛಲ ಅವರಲ್ಲಿತ್ತು. ಇದನ್ನೇ ಅವರು ಇತರರಿಗೂ ತಿಳಿ ಹೇಳುತ್ತಿದ್ದರು.

ಜೀವನ ಪರ್ಯಂತ ಸಮಾಜ ಸೇವೆಯಲ್ಲೇ ಕಾಲ ಕಳೆದ ರಮಾಬಾಯಿಯವರು. ಕ್ರಿ.ಶ. 1998ರ ಜೂನ್ ತಿಂಗಳಿನಿಂದ ಅಸ್ವಸ್ಥರಾಗಿ, ಅದೇ ವರ್ಷದ ಸೆಪ್ಟೆಂಬರ್ ಹದಿನಾರರಂದು ತನ್ನ ಎಂಭತ್ತೆರಡನೆಯ ಹರೆಯದಲ್ಲಿ ಜರಂಧಾಮವನ್ನೈದಿದರು. ಒಂದು ಉತ್ತಮ ಪರೋಕಾರಿ ಚೇತನ ನಮ್ಮಿಂದ ದೂರವಾಯಿತು ಇಂತಹ ವ್ಯಕ್ತಿಯ ಆದರ್ಶ ಗುಣಗಳನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿದರೆ ಅದೇ ನಾವು ಅವರಿಗೆ ಅರ್ಪಿಸುವ ಅಂತಿಮ ಶ್ರದ್ಧಾಂಜಲಿ.

ಬಸ್ತಿ ಕೊಗ್ಗಣ್ಣ ಶೆಣೈ
ಸಂಸ್ಕೃತಮ್
ಭಾರತಿನಗರ ಬಿಜೈ - 575 004.

# ಮದುವೆ



'ಮದುವೆ' ಅಂದರೆ ಬರೇ ಸೀರೆ ಸಿಂಗಾರ ಬಂಗಾರಗಳ ಸಂಭ್ರಮ ಅಲ್ಲ. ದಾಂಪತ್ಯವೆಂದರೆ ಒಂದು ಪವಿತ್ರ ಸಹಚರ್ಯ. ದಾಂಪತ್ಯ ಜೀವನದಲ್ಲಿ ಒಬ್ಬರನ್ನೊಬ್ಬರು ಅರಿತು ಕಷ್ಟ ಸುಖಗಳಲ್ಲಿ ಸಮಭಾಗಿಯಾಗಿ ರಥದ ಎರಡು ಚಕ್ರಗಳಂತೆ, ಸಂಸಾರ ಎಂಬ ರಥವನ್ನು ವಿಶ್ವಾಸ ಎಂಬ ಪಥದಲ್ಲಿ ಮುಂದೆ ಸಾಗಿಸುವುದೇ ಸುಖಸಂಸಾರದ ಗುಟ್ಟು. ಪತಿ ಪತ್ನಿಯರಿಬ್ಬರು ಸಂಸಾರದ ಹೊಣೆಯನ್ನು ನಿರ್ವಹಿಸುವುದರಲ್ಲಿ ಸಮಭಾಗಿಯಾಗಬೇಕು.

# ನಿಶ್ಚಯ ತಾಂಬೂಲ

ಹೆಣ್ಣು ಮಕ್ಕಳಿಗೆ ನೆಂಟಸ್ಥಿಕೆ ಕೂಡಿ ಬರುವ ನಂತರ ಬೀಗರೊಡನೆ ಮಾತು ಖಂಡಿತ ಮಾಡುವುದಕ್ಕೆ 'ನಿಶ್ಚಯ ತಾಂಬೂಲ' ಎನ್ನುತ್ತೇವೆ.

**ಹೋಗುವಾಗ ಮಾಡುವ ತಯಾರಿ :**

ಕುಂಕುಮ-1 ಪಾವು, ಹೂ ಚೆಂಡು-1, ರಸಬಾಳೆ ಹಣ್ಣು-11, ಮಣೆಗಳು-6, ಅವುಗಳ ಮೇಲೆ ಹಾಸಲು ಪಟ್ಟೆ ವಸ್ತ್ರ, ಮಿಠಾಯಿ ಉಂಡೆ-25, ಹಾಲುಸಕ್ಕರೆ (ಕೆಲವು ಗ್ಲಾಸುಗಳು), ವೀಳ್ಯದೆಲೆ-50, ಅಡಿಕೆ-5, ಅಲಂಕರಿಸಿದ ಕಾಲುದೀಪ-1, ತೆಂಗಿನಕಾಯಿ-1, ಗಂಧಪಾತ್ರೆ, ಗುಲಾಬದಾನಿ, ತುದಿಬಾಳೆ ಎಲೆ-2, ಒಂದು ದೊಡ್ಡ ಹರಿವಾಣ ಅಥವಾ ಬೆಳ್ಳಿ ಬಟ್ಟಲು.

**ನಿಶ್ಚಯ ತಾಂಬೂಲ ಮನೆಯಲ್ಲಿ ಆದರೆ :** ಮನೆಯನ್ನು ಚೊಕ್ಕಟವಾಗಿಟ್ಟು, ಮನೆಯ ಎದುರುಬಾಗಿಲಿಗೆ ಮಾವಿನ ಎಲೆಯ ತೋರಣ ಕಟ್ಟಬೇಕು. ಮನೆಯ ನಡುಕೋಣೆ ಹೋಲ್‌ನಲ್ಲಿ ಮಾಡಬಹುದು. ಬೀಗರು ಬರುವ ಒಂದು ಗಂಟೆಯ ಮುಂಚೆ ಹೆಬ್ಬಾಗಿಲು ತೆರೆದಿಡಬೇಕು. ಬೀಗರನ್ನು ಸುಮಹೂರ್ತದಲ್ಲಿ ಕರೆದು ತರಬೇಕು. ಬೀಗರ ಕಡೆಯವರನ್ನು, ತಾಯಿ ಕುಟುಂಬದವರನ್ನು, ಇಷ್ಟ ಮಿತ್ರರನ್ನು ಆಹ್ವಾನಿಸಬೇಕು. ಪುರೋಹಿತರು ಹೇಳಿದ ಪ್ರಕಾರ ಸಾಮಾಗ್ರಿಗಳನ್ನು ತಂದಿಡಬೇಕು. ಐದು ಬಗೆ ತಿಂಡಿಯ ಫಲಾಹಾರ ಮಾಡಬೇಕು. ಈಗ ಹೆಚ್ಚಾಗಿ ಇಂತಹ ಕಾರ್ಯಕಲಾಪಗಳನ್ನು ಕಲಾಮಂದಿರ (ಹೋಲ್)ದಲ್ಲಿ ಮಾಡುವುದು ಕಾಣುತ್ತೇವೆ.

ವಧು ಮತ್ತು ತಾಯಿ ಪಟ್ಟೆ ಸೀರೆ ಉಡಬೇಕು. ಹೂ ಮುಡಿದುಕೊಳ್ಳಬೇಕು. ನೆಲದಮೇಲೆ ಜಮಖಾನ ಹಾಸಿ ನಡುವಿನಲ್ಲಿ ದೀಪ ಇಡಬೇಕು. ಪೂರ್ವ ದಿಕ್ಕಿಗೆ ಮುಖ

ಮಾಡಿ ಕುಳಿತುಕೊಳ್ಳಬೇಕು. ಎರಡೂ ಕಡೆಯ ಪುರೋಹಿತರಿಗೆ ಕುಳಿತುಕೊಳ್ಳಲು ಮಣೆ ಕೊಡಬೇಕು. ಇಬ್ಬರಿಗೂ ಹರಿವಾಣ ತಟ್ಟೆ ಚಿಪ್ಪುಟ ಇತ್ಯಾದಿ ಕೊಡಬೇಕು. ವಧು ವರನ ತಂದೆ ತಾಯಿ ಕುಳಿತುಕೊಳ್ಳಲು ಮಣೆ ಇಟ್ಟು ಅದರ ಮೇಲೆ ಪಟ್ಟೆ ವಸ್ತ್ರ ಹಾಕಬೇಕು. ಮಿಠಾಯಿ, ವೀಳ್ಯ, ಕುಂಕುಮ, ಹೂ ಎಲ್ಲವನ್ನು ಹರಿವಾಣದಲ್ಲಿ ಇಟ್ಟು ಪುರೋಹಿತರು ಹೇಳಿದ ಪ್ರಕಾರ ವಿಧಿಯನ್ನು ಮಾಡಿ ಹರಿವಾಣವನ್ನು ಅದಲು ಬದಲು ಮಾಡುವುದು. ಆಗ ಬೀಗರು ಉಡುಗೊರೆಯಾಗಿ ವಧುವಿಗೆ ಚಿನ್ನ, ಸೀರೆಯನ್ನು ಕೊಡುವ ಕ್ರಮ ಉಂಟು. ರೂ.ಯನ್ನು ಕೊಡಬಹುದು. ಬೀಗರಿಗೆ ಗಂಧ ಪನ್ನೀರು ಕೊಟ್ಟು ಸನ್ಮಾನಿಸಿ, ಹಾಲು ಸಕ್ಕರೆ ಕೊಡಬೇಕು. ವರನಿಗೂ ಕೊಟ್ಟು ಇತರರಿಗೂ ಹಂಚುವುದು. ನಂತರ ವಧುವಿನ ತಾಯಿ ತಂದೆ ವರನಿಗೆ ಧೋತಿ ಅಥವಾ ಪ್ಯಾಂಟು ಶರ್ಟುಗಳ ಬಟ್ಟೆ, ರೂ.ಗಳನ್ನು ಉಡುಗೊರೆಯಾಗಿ ಕೊಡುವರು. ವಧುವು ಹಿರಿಯರಿಗೆಲ್ಲಾ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ಬಂದ ಜನರಿಗೆಲ್ಲಾ ಫಲಾಹಾರ ಮಾಡಿ ಬೀಗರನ್ನು ಆದರಪೂರ್ವಕ ಕಳುಹಿಸಿ ಕೊಡುವುದು. ಈ ನಿಶ್ಚಯ ತಾಂಬೂಲವನ್ನು ಮದುವೆಯ ಮಂಟಪದಲ್ಲಿ ಮಾಡಿದರೆ ಅದಕ್ಕೆ "ವಿಡ್ಯಾವರಣ" ಎನ್ನುತ್ತಾರೆ.

## ನಾಂದಿ

ಮದುವೆ, ಮುಂಜಿ, ಉಪನಯನ ಮೊದಲಾದ ಶುಭಕಾರ್ಯಗಳನ್ನು ಮಾಡುವ ಮೊದಲ ಹೆಜ್ಜೆಯೇ ನಾಂದಿ. ನಾಂದಿ ಇಟ್ಟ ನಂತರ ಶುಭಕಾರ್ಯಗಳಿಗೆ ಕುಟುಂಬದವರಲ್ಲಿ ಜನನ ಮರಣಗಳ ಸೂತಕ ಇಲ್ಲ.

ಮದುವೆಯ ಹತ್ತು ದಿನದ ಮುಂಚಿತವಾಗಿ ನಾಂದಿ ಇಡುವುದು. ತಮ್ಮ ಕುಲಪುರೋಹಿತರನ್ನು ಕರೆದು ತಂದು ಅವರು ಹೇಳಿದ ಪ್ರಕಾರ ವಿಧಿ-ವಿಧಾನವನ್ನು ಪ್ರಾರಂಭಿಸುವುದು. ಶ್ರೀ ಕುಲದೇವರು, ಶ್ರೀ ಗಣಪತಿ, ಗ್ರಾಮದೇವರು, ಶ್ರೀ ಗುರು ಹಿರಿಯರನ್ನು ಸ್ಮರಿಸಿ ಕಾಣಿಕೆ ಇಡುವುದು. (5.25 ರೂ. ಇಡಬಹುದು). ಶುಭಕಾರ್ಯದ ಮೊದಲ ಪ್ರಾರ್ಥನೆ ಶ್ರೀ ಗಣೇಶನಿಗೆ ಸಲ್ಲತಕ್ಕದ್ದು.

**ಮಾಡಬೇಕಾದ ತಯಾರಿ :** ಬೆಳ್ತಿಗೆ ಅಕ್ಕಿ-1 ಕೆ.ಜಿ., ತೆಂಗಿನಕಾಯಿ-1, ವೀಳ್ಯದ (ಪಟ್ಟಿ) ವೀಡೆ 25, ಹೂ-1 ಕುಂಕುಮ, ಅಲಂಕರಿಸಿದ ಕಾಲುದೀಪ-1, ಬಾಳೆಎಲೆ-4, ಶೇಸೆ (ಹರಿವಾಣದಲ್ಲಿ-4 ತೆಂಗಿನಕಾಯಿ, ಸ್ವಲ್ಪ ಬೆಳ್ತಿಗೆ ಅಕ್ಕಿ ಇಡುವುದು). ಅಡಿಕೆ 2, ಆರತಿ, (ಹರಿವಾಣದಲ್ಲಿ 1 ವೀಳ್ಯದ ಎಲೆಯ ಮೇಲೆ ಇಡಬೇಕು).

**ಕಲಶಕ್ಕೆ :** ಚಂಬು-2 ಹಿತ್ತಾಳೆ, ತಾಮ್ರ ಅಥವಾ ಕಂಚಿನದು ಆಗುತ್ತದೆ ಹರಿವಾಣ-3, ತಟ್ಟೆ ಚಿಪ್ಪುಟ, ಮಣೆಗಳು-5, ಅದರ ಮೇಲೆ ಹಾಸಲು ಪಟ್ಟೆ ವಸ್ತ್ರ, ಹೊಸತು ಬುಟ್ಟಿ-1, ನೂಲಿನ ಉಂಡೆ-1, ಒನಕೆ-1, ಚೂರಿ-1, ಬೈರಾಸು-1, ರವಕೆ ಖಣ-1 (ಸೀರೆ ಸಹ ಇಡಬಹುದು) ದೇವಬಾಳೆ ಹಣ್ಣು-15, ಬೆಳ್ತಿಗೆ ಅಕ್ಕಿ-3 ಕೆ.ಜಿ., ಬಾಳೆಎಲೆ-10, ಈ ಸಾಮಾನುಗಳನ್ನು ತಂದು ಪುರೋಹಿತರು ಹೇಳಿದ ಹಾಗೆ ಮಾಡುವುದು. ದೇವರ ಪ್ರಾರ್ಥನೆ ಮಾಡಿ ಮೊದಲು ಪುರೋಹಿತರ ಕಾಲು ಮುಟ್ಟಿ ನಮಸ್ಕರಿಸಬೇಕು. ನೈವೇದ್ಯಕ್ಕೆ ಸಕ್ಕರೆ ಇಡಬೇಕು. ಲಗ್ನದ ದಿನದವರೆಗೆ ದಿನಾಲೂ ನೈವೇದ್ಯ ಇಟ್ಟು ನಾಂದಿ ಇಟ್ಟಲ್ಲಿ ಆರತಿ ಬೆಳಗಿಸಬೇಕು. ನಾಂದಿ

ಇಟ್ಟ ದಿನವೇ ಕುಟುಂಬದ 5 ಮನೆಯವರಿಗಾದರೂ "ಹೇಳಿಕೆ" ಮಾಡಬೇಕು. ಮೊದಲು ತಾಯಿ ಮನೆಗೆ, ಹಿರಿಯರ ಮನೆಗೆ ಹೇಳಿಕೆ ಮಾಡಬಹುದು. ಅದೇ ದಿನ ಮಂಟಪದಲ್ಲಿ ಉಡುವ ಸೀರೆಗೆ (ಮಾಂಟ್ಸೆ ಕಾಪ್ಪಡ) "ವಾಡಪ" ಮಾಡಬಹುದು. ಅಥವಾ ಶುಕ್ರವಾರ ಮಾಡಿದರೂ ಆಗಬಹುದು. ನೈವೇದ್ಯಕ್ಕೆ ಅವಲಕ್ಕಿ ಕಜ್ಜಾಯ ಮಾಡಬಹುದು. ಒಂದು ದೊಡ್ಡ ಮಣೆಯನ್ನು ತೊಳೆದು ರಂಗವಲ್ಲಿ ಹಾಕಿ ಮಂಟಪ ಸೀರೆಯ ಸೆರಗು (ವರ್ಲ) ಮೇಲೆ ಮಡಚಿ ಮಣೆಯಲ್ಲಿ ಇಡುವುದು. ಅದರ ಮೇಲೆ ಧಾರೆಮಣಿ, ಕಾಲುಂಗುರ ಇತರ ಆಭರಣಗಳು (ವಧುವಿನ) ಇಡಬೇಕು. ಕಾಡಿಗೆ, ಕುಂಕುಮ ಕರಡಿಗೆ, ಮಲ್ಲಿಗೆ ಹೂ ತುಂಡು, ವೀಳ್ಯದ ವೀಡೆ 1, ಸ್ವಲ್ಪ ಬೆಳ್ತಿಗೆ ಅಕ್ಕಿ (ಅಕ್ಷತೆ) ಇಡಬೇಕು. ಕಾಲು ದೀಪ ಬೆಳಗಿಸಿ ಇಡಬೇಕು.

**ಅಡಿಗೆ :** ಕಡ್ಲೆಗಶಿ, ಗೋಡಿರಾಂದಯಿ, ಬಟಾಟೆ ಉಪ್ಕರಿ, ಸಿಹಿಪಾಯಸ ಮಾಡಿ ದೇವರ ಕೋಣೆಯಲ್ಲಿ ಇಟ್ಟ ಸೀರೆಯ ಮಣೆಯ ಎದುರಲ್ಲಿ ಬಡಿಸಬೇಕು. ನಂತರ ತುಪ್ಪ, ಮಜ್ಜಿಗೆ ಬಡಿಸಿ ಮನೆಯ ಹಿರಿಯ ಗಂಡಸರಿಂದ ಬಡಿಸಿದ ಸೀರೆ ಇಟ್ಟ ಮಣೆಗೂ, ದೇವರಿಗೂ ಆರತಿ ಬೆಳಗಿಸಿ ಒಂದು ಪ್ರದಕ್ಷಿಣೆ ಬಂದು ಹಿರಿಯ ಹೆಂಗಸರನ್ನು ಸ್ಮರಿಸಿ ಮಣೆಯನ್ನು ಅಲ್ಲಾಡಿಸಿ ಬೀಡಬೇಕು. ಆರತಿ ಮಾಡಿದವರು ಬಡಿಸಿದ ಎಲೆಯಲ್ಲಿ ಊಟ ಮಾಡಬೇಕು. ಹೆಂಗಸರು ಹೂ ಕುಂಕುಮ ಕಾಡಿಗೆ ಹಚ್ಚಿಕೊಳ್ಳಬೇಕು. ವರನ ಕಡೆಯವರೂ ವಧುವಿನ ಲಗ್ನದ ಸೀರೆ, ಬಂಗಾರವಿಟ್ಟು ಹೀಗೆಯೇ ವಾಡಪ ಮಾಡಬೇಕು.

**ವಿ.ಸೂ.** ನಾಂದಿ ಮತ್ತು ನಿಶ್ಚಯ ತಾಂಬೂಲದ ವಿಧಿ ವಿಧಾನ, ಮಾಡುವ ತಯಾರಿ ವಧುವರನ ಕಡೆಯವರಿಗೂ ಒಂದೇ ಪ್ರಕಾರವಾಗಿದೆ.

## ಮದುವೆಯ ಮೊದಲ ತಯಾರಿ

1. ಮದುವೆಯ ಹೋಲ್ ಬುಕ್‌ಮಾಡಬೇಕು. 2. ವಾದ್ಯದವರಿಗೆ (ಓಲಗ) ಹೇಳಿ ಇಡಬೇಕು. 3. ಭಟ್ಟರಿಗೆ ಹೇಳಬೇಕು. 4. ವಿಡಿಯೋ ಫೋಟೋದವರಿಗೆ ಹೇಳಿ ಇಡಬೇಕು. 5. ವಧುವನ್ನು ಸಿಂಗರಿಸುವ ಹೆಂಗಸರಿಗೆ ಮೇಕಪ್ ಮಾಡುವವರಿಗೆ ಹೇಳಬೇಕು. 6. ಹೂ ಮಾಲೆಗಳಿಗೆ ಆರ್ಡರ್ ಕೊಡಬೇಕು. 7. ಅಡಿಗೆ, ತಿಂಡಿಗಳ ಏರ್ಪಾಡು. 8. ಮಂಟಪ ಸಿಂಗರಿಸುವವರಿಗೆ ಹೇಳಿಡಬೇಕು. 9. ವರನ ಕಾರು ಸಿಂಗರಿಸಬೇಕು.

**ಮದುವೆ ಹೋಲ್‌ಗೆ ಹೋಗುವಾಗ ತೆಗೆದುಕೊಂಡು ಹೋಗುವ ಸಾಮಾನುಗಳನ್ನು ಒಂದೆರಡು ದಿನ ಮೊದಲೇ ಪೆಟ್ಟಿಗೆಯಲ್ಲಿ ಹಾಕಿ ತಯಾರಿ ಮಾಡಿ ಇಡಬೇಕು.**

**ವಧುವಿನ ಮನೆಯವರು :** ಕುಂಕುಮ, ಗಂಧದಪಾತ್ರೆ, ಗುಲಾಬುದಾನಿ-2, ವರನಿಗೆ ಕೊಡುವ ಉಂಗುರ, ಶರ್ಟುಪೀಸು, ವಧುವಿನ ತಂದೆಗೆ ಉಡಲು ಪಾಟ್ಟೆತೊಡಪು, ತಲೆಗೆ ಕಟ್ಟಲು ಸಣ್ಣ ಶಾಲು, ತಾಯಿಯವರ ವಸ್ತ್ರ, ವಧುವಿನ ಡ್ರೆಸ್ ಒಂದು ಸಣ್ಣ ಬ್ಯಾಗ್‌ನಲ್ಲಿ ತಯಾರಿ ಮಾಡಿಡಬೇಕು. ಟೊಯಲೆಟ್ ಬಾಕ್ಸ್, ಕಾಡಿಗೆ ಕರಡಿಗೆ, ರಿಬ್ಬನ್, ಸೇಫ್ಟಿಪಿನ್,

ಕ್ಲಿಪ್ಸ್, ಪೌಡರ್, ಬಾಚಣಿಗೆ, ಕನ್ನಡಿ, ಬೈರಾಸು, ಸಾಬೂನು, ಧೋತಿ, ವರನಿಗೆ ಕೊಡುವ ಮಂಟಪ ಸಭೆ (ಸಂಧ್ಯಾವಂದನೆಯ ಸಂಧೂಕ, ಬಟ್ಟಲು, ತಟ್ಟೆ ಚಿಪ್ಪುಟ, ಕನ್ನಡಿ, ಪ್ಯಾಂಟ್ ಪೀಸ್ (ಸ್ವಲ್ಪ ರೂ. ಕೂಡಾ)ಧಾರೆ ಎರೆಯಲು ಸಣ್ಣ ಮಿಳ್ಳಿ, ಅಂತರಪಾಟು, ಮಂಟಪದಲ್ಲಿ ಮಾಡುವ ಉಡುಗೊರೆಗಳು-3, ದಕ್ಷಿಣೆ, ಭೂರಿದಕ್ಷಿಣೆ ಇದನ್ನೆಲ್ಲಾ ಹೋಲ್‌ಗೆ ಕೊಂಡುಹೋಗಿ, ಅತೀ ಜಾಗ್ರತೆ (ಕಳವಾಗದಂತೆ) ಯಿಂದ ನಂಬಿಗಸ್ತ ಜನರ ಹತ್ತಿರ ಕೊಟ್ಟು ಇಡಬೇಕು.

**ವರನ ಕಡೆಯವರು ಮಾಡ ಬೇಕಾದ ತಯಾರಿ :** ವರನ ಡ್ರೆಸ್, ರುಮಾಲು, ಶಾಲು, ಪೌಡರ್, ಬಾಚಣಿಗೆ, ವರನ ಪಾಟ್ಯಾ ತೊಡೊಪ್ಪು, ಶಾಲು, ಬೈರಾಸು, ಮುಂಡು 2, ವಧುವಿನ ಲಗ್ನದ ಸೀರೆ, ಚೌಕದ ಬಾಚಣಿಗೆ, ಇತರ ಸೀರೆಗಳನ್ನೂ ಬಂಗಾರವನ್ನೂ ಜಾಗ್ರತೆಯಿಂದ ತೆಗೆದಿಟ್ಟು, ಅಂತರಪಾಟು ವಸ್ತ್ರ, ವಧುವಿನ ತಂದೆ ತಾಯಿಗೆ ಕೊಡುವ ಸೀರೆ, ಧೋತಿ, ಲಾಯ್ಯೆಶಲ್ಲೊ, ಬಾಗಿಲಧೊರ್ಚೆ ಹೋಲ್‌ನಲ್ಲಿಯೇ ಆದರೆ ಅಲ್ಲಿ ಕೊಡುವ ಉಡುಗೊರೆಗಳು, ಪತಿಗೆ ಆರತಿ ಮಾಡುವಾಗ ಕೊಡುವ ಉಡುಗೊರೆ, ರೂ .......? ಪತ್ತಾಬಾಂದುಚೆ 5.25ರೂ., ಉಸ್ಪೆಖಾವ್ಚೆ ರೂ .....? ಹೆಸರಿಡುವಾಗ ಓಕುಳಿ ಉಂಗುರ ಎಲ್ಲವನ್ನೂ ಒಂದು ಪೆಟ್ಟಿಗೆಯಲ್ಲಿ ತೆಗೆದುಕೊಂಡು ಹೋಲ್‌ನಲ್ಲಿ ನಂಬಿಗಸ್ತ ಜನರ ಹತ್ತಿರ ಕೊಟ್ಟು ಇಡಬೇಕು.

**ಮಂಟಪದಲ್ಲಿ ಮಾಡಬೇಕಾದ ತಯಾರಿ :** ಹೊರ ಬಾಗಿಲಿನಲ್ಲಿ ನೀರಿನ ಕಳಶ, ಬೈರಾಸು, ಹರಿವಾಣದಲ್ಲಿ ಕುಂಕುಮದ ನೀರು (ವರನಿಗೆ ಓವಾಳಿಸಲು) ಅಲಂಕರಿಸಿದ ಕಾಲುದೀಪ-2, ವಧೂವರರಿಗೆ ಕುಳಿತುಕೊಳ್ಳಲು ಸೋಫಾ ಅಥವಾ ಕುರ್ಚಿ, ಕೈ ಒರಸಲು ಒಂದು ಸಣ್ಣ ಟವೇಲು (ರುಮಾಲು) ಪುರೋಹಿತರಿಗೆ ಹರಿವಾಣ, ತಟ್ಟೆಚಿಪ್ಪುಟ, ಅಕ್ಷತ ಪಾತ್ರೆ, ಕುಂಕುಮ, ಗಂಧ, ಗುಲಾಬದಾನಿ, ಪುರೋಹಿತರು ಹೇಳಿದ ಪ್ರಕಾರ ಬೆಳ್ತಿಗೆ ಅಕ್ಕಿ, ತೆಂಗಿನ ಕಾಯಿ, ಹೂ, ವೀಳ್ಯದ ಪಟ್ಟಿ (ವೀಡೆ), ಬಾಳೆ ಎಲೆ-25, ದೇವ ಬಾಳೆ ಹಣ್ಣು-30, ವಧೂವರರ ಹೂಮಾಲೆಗಳು-2, ದನದ ತುಪ್ಪ, ದನದ ಹಾಲು-¼ ಲೀಟರ್, ಪಿಟ್ಟಾದಿವ್ವೆ-32, ಗುಳಿಗಳು-32, (ಒಂದು ಪಾವು ಅಕ್ಕಿ ಹಿಟ್ಟನ್ನು ಒಂದುವರೆ ಮುಷ್ಠಿ ಅರಸಿನ ಹುಡಿ, ಸ್ವಲ್ಪ ಸುಣ್ಣ ಬೆರೆಸಿ ನೀರಿನಿಂದ ಕಲಸಿ ಮುದ್ದೆ ಮಾಡಿ ಬೋಳಾಗುಳಿಯಂತೆ ಸಣ್ಣ ಗುಳಿಗೆಗಳನ್ನು ಮಾಡಿ ಚಟ್ಟೆ ಮಾಡಬೇಕು). ವೀಳ್ಯದ ತುಂಡು ಇಟ್ಟು ಸಣ್ಣ ಬತ್ತಿಗಳನ್ನು ಎಣ್ಣೆಯಲ್ಲಿ ಮುಳುಗಿಸಿ ಅದರ ಮೇಲೆ ಇಡುವುದು. ಉದ್ದಿನ ಹೋಮದ ಮುಹೂರ್ತಕ್ಕೆ ಮತ್ತು ಲಗ್ನದ ಹೋಮಕ್ಕೆ ಹಲಸಿನ ಕೆತ್ತೆ (ಕಾಪ್ಟಿ), ಸೇವಂತಿಗೆ ಹೂ, ಸಾಣೆಕಲ್ಲು, ಶೇಡಿತುಂಡು, ಅರಸಿನ ತುಂಡು 2, ಭಟ್ಟರಿಗೆ ಕುಳಿತುಕೊಳ್ಳಲು ಮಣೆಗಳು, ಧಾರೆ ಎರೆಯಲು ಚಂಬು, ದನದ ಹಾಲು, ಹೊದ್ಲು, ಬೆಲ್ಲ, ಜೀರಿಗೆ, ಅಂತರಪಾಡು, ಸಂದೂಕದ ಸಾಮಾನು, ಪ್ಯಾಂಟ್‌ಪೀಸ್ (ವರನಿಗೆ ಕೊಡಲು) ಭಟ್ಟರ ಹತ್ತಿರ ಕೊಡಬೇಕು. ಮದುವೆ ಮುಂಚಿನ ದಿನ ಹೋಲ್‌ಗೆ ಹೋಗಿ ಎಲ್ಲಾ ಏರ್ಪಾಟು ನೋಡಿ ಬರಬೇಕು. ಮಾವಿನ ಎಲೆಯ ತೋರಣ ಕಟ್ಟಬೇಕು.

**ವಧುವಿನ ಮನೆಯಿಂದ ಹೊರಡುವ ಮೊದಲು :** ವಧು ಮತ್ತು ತಾಯಿ ಬೆಳಿಗ್ಗೆ 5 ಗಂಟೆಗೆ ಎದ್ದು ಅರಸಿನ ಹುಡಿ ಮೈಗೆ ಸವರಿ 5 ಸಾರಿ ಬಾಯಿ ಮುಕ್ಕಳಿಸಬೇಕು. ವಧುವಿಗೆ ತಲೆ ಸ್ನಾನ ಮಾಡಿ ಹೊರಗೆ ಬರುವ ಮೊದಲು ಕುಂಕುಮ ಬೊಟ್ಟು ಮಾಡಿ ತರಬೇಕು. ಲಗ್ನ ಚೂಡಿ ಬಲಕೈಗೆ 3 ಬಳೆ, ಎಡಕೈಗೆ 2 ಬಳೆಗಳು (ಕಪ್ಪು) ಹಾಕಬೇಕು.

**ದಿಬ್ಬಣ ಕರೆತರುವುದು :** ದಿಬ್ಬಣ ಕರೆತರಲು ವಧುವಿನ ಅಣ್ಣ ಅಥವಾ ತಮ್ಮ ಹೂ ಮಿಠಾಯಿ ತೆಗೆದುಕೊಂಡು ಹೋಗಬೇಕು. ಊರಿನಲ್ಲಿಯೇ ಆದರೆ ಅದೇ ದಿನ ಬೆಳಿಗ್ಗೆ ಹೋಗಬಹುದು. ಮಿಠಾಯಿ ಕೊಟ್ಟು ಬೀಗರ ಮನೆಯಲ್ಲಿ ಸಣ್ಣ ಮಕ್ಕಳಿದ್ದಲ್ಲಿ ಉಡುಗೊರೆಯಾಗಿ ರೂ .....? ಕೊಡಬೇಕು. ತಮ್ಮ ಅನುಕೂಲ ಪ್ರಕಾರ ರೂ. 10, 15, 25, 50 ..........

**ದಿಬ್ಬಣ ಹೊರಡುವ ತಯಾರಿ :** ಕಲ್ಸಕನ್ನಡಿ : ಒಂದು ಹರಿವಾಣದಲ್ಲಿ (ಬಟ್ಟಲು) 2 ಮುಷ್ಟಿ ಬೆಳ್ತಿಗೆ ಅಕ್ಕಿ ಹಾಕಿ ಅದರ ಮೇಲೆ ಸಣ್ಣ ಮಿಳ್ಳಿ ಇಟ್ಟು (ಚಂಬು) ಅದರಲ್ಲಿ ನೀರು, ಹೂ ತುಂಡು, ಅಕ್ಷತೆ ಹಾಕಿ ಅದರ ಮೇಲೆ ಒಂದು ಸಣ್ಣ ತೆಂಗಿನಕಾಯಿ, ಅದಕ್ಕೆ ಒರಗಿ ಕನ್ನಡಿ, ಕನ್ನಡಿಗೆ ಹೂಮಾಲೆ, ಚಿನ್ನದ ಸರ ಹಾಕಿ ಅದನ್ನು ವರನ ತಂಗಿ ಯಾ ಅಕ್ಕ, ವಧುವಿನ ಕಡೆಯಿಂದ ವಧುವಿನ ತಂಗಿಯಾ ಅಕ್ಕ ಹಿಡಿಯಬೇಕು. (ದಿಬ್ಬಣ ಒಳಗೆ ಹೋದಕೂಡಲೇ ಚಿನ್ನದ ಸರವನ್ನು ತೆಗೆದು ತಮ್ಮ ಕೊರಳಲ್ಲಿ ಧರಿಸಿ ಕೊಳ್ಳುವುದು).

**ತಯಾರಿ : ಕಲ್ಸಕನ್ನಡಿ,** ಹೂತುಂಡು ಅಥವಾ ಸೇವಂತಿಗೆ, ಕುಂಕುಮ ಪಾತ್ರೆ, ಗಂಧದ ಪಾತ್ರೆ, ಗುಲಾಬದಾನಿ, ವೀಳ್ಯದ ಪಟ್ಟಿ (ವೀಡೆ) 25, ಬೆಳ್ತಿಗೆ ಅಕ್ಕಿ 1 ಪಾವು, (ಒಂದೇ ಹರಿವಾಣದಲ್ಲಿ ಇಡುವುದು. ನಾಲ್ಕು ತೆಂಗಿನಕಾಯಿ ಇಟ್ಟು ಶೇಸೆ).

## ದಿಬ್ಬಣ ಹೊರಡುವ ಮೊದಲು

ದಿಬ್ಬಣ ಹೊರಡುವ ಮೊದಲು ಮನೆಯಲ್ಲಿ ದೇವರ ಪ್ರಾರ್ಥನೆ. 15 ವೀಳ್ಯದ ಪಟ್ಟಿಗಳನ್ನು ತಯಾರಿ ಮಾಡಬೇಕು. ಪುರೋಹಿತರು ಬಂದು ಪ್ರಾರ್ಥನೆ ಮಾಡಿ ವಧುವಿನ ಮನೆಯಲ್ಲಿಯೂ ವರನ ಮನೆಯಲ್ಲಿಯೂ ವಧು ವರದಿಂದ ಗುರುಹಿರಿಯರಿಗೆ ವೀಳ್ಯದ ಪಟ್ಟಿ ಕೊಟ್ಟು ನಮಸ್ಕರಿಸಿ ಆಶೀರ್ವಾದ ಪಡೆಯುವುದು. ನಂತರ ದಿಬ್ಬಣ ಹೊರಡುವುದು.

## ಎದುರು ಕಾಣ್ಸಣೆ

ವರನ ಕಡೆಯವರನ್ನು ಹೂ, ಕುಂಕುಮ, ಗಂಧ, ಪನ್ನೀರ್ ಸಿಂಪಡಿಸಿ ಸನ್ಮಾನಪೂರ್ವಕ ಮದುವೆ ಮಂಟಪಕ್ಕೆ ಕರೆದು ತರುವ ಕ್ರಮಕ್ಕೆ 'ಎದುರು ಕಾಣ್ಸಣೆ' ಎನ್ನುತ್ತಾರೆ.

ಕನ್ಯಾದಾನ ಮಾಡುವವರು ವರನ ಕೈಯಲ್ಲಿ ತೆಂಗಿನಕಾಯಿ ಕೊಡುವುದು. ಹೆಣ್ಣಿನ ಕಡೆಯವರು ಬೀಗರಿಗೆ ಹೂ, ಕುಂಕುಮ, ಗಂಧ, (ವೀಡೊ) ವೀಳ್ಯದ ಪಟ್ಟಿ, ಅಕ್ಷತೆ

ಹಂಚುವುದು. (5 ಜನರು ಹೆಂಗಸರು, ಕಳ್ಸ ಕನ್ನಡಿ ಹಿಡಿದ ಅಕ್ಕ, ಶೇಸೆ ಹಿಡಿದವರೂ ಹೋಗಬೇಕು). ಬೀಗರಿಂದ ಹೂ ಅಕ್ಷತೆ ಪಡೆದ ನಂತರ ಎರಡೂ ಕಡೆಯವರು ಒಬ್ಬರಿಗೊಬ್ಬರು ಅಕ್ಷತೆ ಸಿಂಪಡಿಸಿ ಒಂದು ಗೂಡಿ ಮದುವೆ ಮಂಟಪಕ್ಕೆ ಬರುವುದು. ಬೀಗರ ಕಾಲು ತೊಳೆದು ವರನಿಗೆ ಕುಂಕುಮ ನೀರು ನಿವಾಳಿಸಿ ವರನನ್ನು ಕೈ ಹಿಡಿದು ತಂದು ಯೋಗ್ಯ ಆಸನದಲ್ಲಿ ಕುಳ್ಳಿರಿಸುವುದು. ದಿಬ್ಬಣವನ್ನು ವಾದ್ಯದಲ್ಲಿ ಒಳಗೆ ಕರೆತರುವುದು.

## ವರನಿಗೆ ಉಂಗುರ ಹಾಕುವುದು

ವರನಿಗೆ ಉಂಗುರ ಹಾಕುವುದಕ್ಕೆ 'ಸೀಮಂತ ಪೂಜೆ' ಎನ್ನುತ್ತಾರೆ.

**ತಯಾರಿ :** ತಟ್ಟೆ ಚಿಪ್ಪುಟ. ಉಡುಗೊರೆಯ ಉಂಗುರ, ಪ್ಯಾಂಟ್ ಬಟ್ಟೆ ಹಾಲು ಸಕ್ಕರೆ, ಮಣೆಗಳ ಮೇಲೆ ಪಟ್ಟೆ ವಸ್ತ್ರ, ಪುರೋಹಿತರಿಗೆ ಮಣೆ, ಹಾಲು ಇಡಲು ಬೆಳ್ಳಿ ಚಂಬು, ಗ್ಲಾಸು, ಉಂಗುರ ಹಾಕುವಾಗ ವರನಿಗೆ ಜನಿವಾರ, ಹೂಮಾಲೆ ಹಾಕಿ 5 ಬಗೆಯ ಮಿಠಾಯಿ, ಹಾಲು ಸಕ್ಕರೆ ಕೊಟ್ಟು (ದೆಡ್ಡೆ ಕೂತವನಿಗೆ, ಇತರರಿಗೂ ಕೊಡಬೇಕು) ಉಂಗುರ ಹಾಕಬೇಕು. ಹುಡುಗನಿಗೆ ಉಂಗುರ ಹಾಕುವಾಗ ಅವನ ದೆಡ್ಡೆಗೂ ಉಡುಗೊರೆ ಮಾಡುವ ಕ್ರಮ ಇದೆ.

## ಹೂ ಮುಡಿಸುವುದು

ಹೆಣ್ಣನ್ನು ಶೃಂಗರಿಸಿ ಬೀಗರ ಹೆಂಗಸರ ಎದುರು ತಂದು ಕುಳ್ಳರಿಸಬೇಕು. ಹತ್ತಿರ ದೆಡ್ಡಿ (ವಧುವಿನ ತಂಗಿ ಇದ್ದರೆ ಅವಳು) ಕುಳಿತು ಕೊಳ್ಳಬೇಕು. ಬೀಗರಿಗೆ ಬೇಕಾದ ಸಾಮಾನು ತಯಾರಿ ಮಾಡಿಕೊಡಬೇಕು.

**ತಯಾರಿ :** ಸೀರೆ, ಚಿನ್ನ, ಹೂ ಹರಿವಾಣದಲ್ಲಿ ಇಡುವುದು. ಅಲಂಕೃತ ದೀಪ, ಶೇಸೆ, ಆರತಿ, ಹೂ ಕುಂಕುಮ, ಅಕ್ಷತೆ, ಹಾಲು ಸಕ್ಕರೆ, 5 ಬಗೆಯ ಮಿಠಾಯಿಗಳು, ಕೊಡುವ ಸೀರೆ, ಚಿನ್ನ, ಕೆಲವು ಸ್ಟೀಲಿನ ಗ್ಲಾಸುಗಳು.

**ಮಾಡುವ ಕ್ರಮ :** ಅತ್ತೆಯು ವಧುವಿಗೆ ಕುಂಕುಮ ಹೂ ಕೊಟ್ಟು, ಹೂ ಮುಡಿಸಿ, 5 ಬಗೆಯ ಮಿಠಾಯಿ ದೆಡ್ಡಿಗೆ ಸಮೇತ ತಿನ್ನಲು ಕೊಟ್ಟು, ಹಾಲು ಸಕ್ಕರೆ ಕೊಟ್ಟು, ಸೀರೆ, ಚಿನ್ನ ಉಡುಗೊರೆ ಮಾಡುವುದು. ಈಗ ದೆಡ್ಡಿಗೆ ಸಹಾ ಉಡುಗೊರೆ ಮಾಡುವ ಕ್ರಮ ಉಂಟು. ನಂತರ ವಧುವು ಹೊಸ ಸೀರೆ ಉಟ್ಟು ಬಂದ ಮೇಲೆ ಶೇಸೆ ಆರತಿ ಮಾಡುವುದು. ಈಗ ಹುಡುಗನ ತಾಯಿಗೆ, ಬೀಗರಿಗೆ ಮುಡಿಯಲು ನಾಲ್ಕು ಚೆಂಡು ಮಲ್ಲಿಗೆ ಹೂ ಕೊಡುವ ವಾಡಿಕೆ ಇದೆ. ಇದಾದ ಮೇಲೆ ಎಲ್ಲರಿಗೂ ಫಲಾಹಾರ ಕೊಡುವುದು.

## ಘುಡ್ಯೆ ಉದ್ವಾಕ

'ಘುಡ್ಯೆ ಉದ್ವಾಕ' ಅಂದರೆ ಮುಂಚಿನ ಕಾಲದಲ್ಲಿ ಗಡಿಯಾರ ಇಲ್ಲದಿದ್ದರೂ ಆ ನೀರಿನಲ್ಲಿ ನೋಡಿ ಸಮಯ ತಿಳಿದುಕೊಳ್ಳುತ್ತಿದ್ದರು.

**ತಯಾರಿ :** ಬೆಳಗಿದ ದೀಪ, ಸಣ್ಣ ಕಠಾರಕ್ಕೆ (ತೋಪು) ಮಾವಿನ ಎಲೆ ಕಟ್ಟಬೇಕು. 5 ಸಣ್ಣ ಚಂಬುಗಳಿಗೆ ಮಾವಿನ ಎಲೆ ಕಟ್ಟಬೇಕು. ಶೇಸೆ ಆರತಿ, ಮಣೆ 5, ಪುರೋಹಿತರಿಗೆ ತಟ್ಟೆ ಚಿಪ್ಪುಟ, ಹರಿವಾಣದಲ್ಲಿ ಅಕ್ಷತೆ, ಹೂ, ಕುಂಕುಮ, ಬಾಳೆಹಣ್ಣು, ಅಗರಬತ್ತಿ ಕೊಡಬೇಕು. ಬೀಗರ ಹೆಂಗಸರನ್ನೂ ಕರೆದು (ಅಗತ್ಯವಾಗಿ ಅತ್ತೆ) ವಧು, ವಧುವಿನ ತಾಯಿ ಸಮೇತ 5 ಮಂದಿ ಮುತ್ತೈದೆಯರು ಒಂದೊಂದು ಚಂಬು ಹಿಡಿದು ಪುರೋಹಿತರೊಡನೆ ಬಾವಿ ಅಥವಾ ಪೈಪಿನ ಹತ್ತಿರ ಹೋಗಿ ಪುರೋಹಿತರು ಹೇಳಿದಂತೆ ಗಂಗೆ ಪೂಜೆ ಮಾಡುವುದು. ಹಿರಿಯ ಹೆಂಗಸರಿಂದ ನೀರನ್ನು ಚಂಬುಗಳಲ್ಲಿ ತುಂಬಿಸಿ ಮಂಟಪದ ಹತ್ತಿರ ಬಂದು ಆ ಚಂಬಿನ ನೀರನ್ನು ಐದೈದು ಸಾರಿ ಕಠಾರದಲ್ಲಿ ಹಾಕಿ ಪುರೋಹಿತರು ಹೇಳಿದ ಪ್ರಕಾರ ಮಾಡಿ ವಧುವಿನ ತಂದೆ-ತಾಯಿ, ಕನ್ಯೆ ಮತ್ತು ದೆಡ್ಡಿ ಕೂತು ನಾಲ್ಕು ಜನರಿಗೆ ಶೇಸೆ ಆರತಿ ಮಾಡುವುದು.

## ವಧುವಿನ ಸಮಾವರ್ತನೆ ಅಥವಾ ಉದ್ದಿನ ಮುಹೂರ್ತ

**ತಯಾರಿ :** ಅಲಂಕೃತದೀಪ, ಬೆಳ್ತಿಗೆ ಅಕ್ಕಿ, ಬಾಳೆಎಲೆ, ತೆಂಗಿನಕಾಯಿ (ಪುರೋಹಿತರು ಹೇಳಿದಂತೆ) ಹರಿವಾಣ-2, ಹೂ, ಕುಂಕುಮ, ಶೇಸೆ ಆರತಿ, ಮಣೆಗಳು-5, ಉದ್ದು-1/¼ ಸೇರು, ಹೆಸ್ರು-1¼ ಸೇರು, ಅರಸಿನ ಹುಡಿ, ಚಮಚ, ಎಣ್ಣೆ, ಮಾವಿನ ಎಲೆ ಕೊಡಿಯಿಂದ 5 ಸಾರಿ ಬಲ ಬದಿಗೆ ಹಚ್ಚುವುದು. (ಕನ್ಯೆಯ ಸಂಧು ಸಂಧಿಗೆ ಹಚ್ಚುವುದು) ದೆಡ್ಡಿಗೂ ಹಚ್ಚುವುದು, ನಂತರ ಶೇಸೆ ಆರತಿ. ಹಿರಿಯರಿಗೆ ಸೀರೆ ಹಂಚುವುದಿದ್ದರೆ ಕನ್ಯೆಯಿಂದ ಸೀರೆ ಹಂಚಿಸುವುದು. ವಧುವಿಗೆ ಕಾಫಿ-ತಿಂಡಿ ಕೊಟ್ಟು ಲಗ್ನದ ಡ್ರೆಸ್ ಮಾಡಿಸುವುದು.

## ವರನ ಸಮಾವರ್ತನೆ ಅಥವಾ ಉದ್ದಿನ ಮುಹೂರ್ತ

ಶ್ರೀ ಕುಲದೇವರು, "ಮಹಾಗಣಪತಿ"ಯನ್ನು ಸ್ಮರಿಸಿ ಗುರುಹಿರಿಯರನ್ನು ಸ್ಮರಿಸಿ ಕಾಣಿಕೆ ಇಟ್ಟು ವರನು ಹಿರಿಯರಿಂದ ಆಶೀರ್ವಾದ ಪಡೆಯುವುದು. ನಂತರ ಹೋಮಕ್ಕೆ ತಯಾರಿ. ವರನ ಉದ್ದಿನ ಮುಹೂರ್ತಕ್ಕೆ ಸಮಯ ಹೆಚ್ಚು.

**ತಯಾರಿ :** ಬೀಸುವ ಕಲು, ಗೋಮೆಯ ಅಗತ್ಯ ಬೇಕು. ನವಧಾನ್ಯ, ದನದ ತುಪ್ಪ, ಚೌರು ಎಂಬ ಬೆಳ್ತಿಗೆ ಅಕ್ಕಿಯ ಅನ್ನ, ವರನಿಗೆ ಹೂಮಾಲೆ, ಹೆಸರು 1¼ ಸೇರು, ಉದ್ದು 1¼ ಸೇರು, ಸ್ವಲ್ಪ ಅರಸಿನ ಹುಡಿ, ತೆಂಗಿನ ಎಣ್ಣೆ, ಹೂ, ಕುಂಕುಮ, 1 ಕೊಡೆ, ವೀಳ್ಯದ ಪಟ್ಟಿ, ತೆಂಗಿನ ಕಾಯಿ, ಬಾಳೆಎಲೆ.

**ಕ್ಷೌರಿಕನಿಗೆ ಕೊಡಲು :** ರೂ. .....? ಮನಸ್ಸಿದ್ದರೆ ವಸ್ತುಗಳನ್ನು ಕೊಡಬಹುದು. ಅಕ್ಕಿ-1 ಸೇರು, ಕ್ಷೌರ ಮಾಡುವಾಗ ಸ್ವಲ್ಪ ದನದ ಹಾಲು, ತೆಂಗಿನ ಕಾಯಿ, ವೀಳ್ಯದ ಪಟ್ಟಿ ಹಣ ಎಲ್ಲವನ್ನೂ ಒಂದು ಹರಿವಾಣದಲ್ಲಿ ಇಟ್ಟು ವರನ ಕೈಯಿಂದ ಕ್ಷೌರಿಕನಿಗೆ ಕೊಡಿಸುವುದು.

**ಮಾಡುವ ಕ್ರಮ :** ವರನ ಅಕ್ಕ ಯಾ ತಂಗಿಯರಿಂದ ಕಣ್ಣಿಗೆ ಕಾಡಿಗೆ ಹಚ್ಚುವುದು. ಉದ್ದು ಬೀಸುವುದು. ಹೋಮದ ಹವನ ಆದ ನಂತರ ಕಾಶೀಯಾತ್ರೆಗೆ ಹೋಗುವ ಕ್ರಮ ಉಂಟು. ಕನ್ಯೆಯ ತಂದೆಯು ತನ್ನ ಅಳಿಯನನ್ನು ಯಾತ್ರೆಗೆ ಹೋಗುವುದನ್ನು ತಡೆದು ತನ್ನ ಮಗಳನ್ನು ಕನ್ಯಾದಾನವಾಗಿ ಸ್ವೀಕರಿಸಲು ವಿನಂತಿಸಿ, ಉಡುಗೊರೆಯನ್ನು ಮಾಡುವುದು. (ರೂ....25,100 ತಮಗೆ ಇಷ್ಟವಿದ್ದಷ್ಟು), ಮಾವನ ಒಪ್ಪಿಗೆ ಪಡೆದು ಒಳಗೆ ಬಂದು "ಪಿಟ್ಟಾದಿವ್ವೆ" ಆರತಿ ತೋರಿಸುವುದು (ದೆಡ್ನೊ ಬೇಕು). ದಾನಗಳನ್ನು ಬ್ರಾಹ್ಮಣರಿಗೆ ಹಂಚಿದ ನಂತರ ನಾಲ್ಕು ಮಂದಿಗೂ ಶೇಸೆ ಆರತಿ ಮಾಡಿ ಹಿರಿಯ ಹೆಂಗಸು ಶೇಸೆ ಹಿಡಿದು ಹೋಮದ ಸುತ್ತು ತೆಗೆಯಬೇಕು. ಅವರ ಹಿಂದೆಯೇ ಬಾಕಿ ನಾಲ್ಕು ಮಂದಿಯೂ ಸುತ್ತು ತೆಗೆಯಬೇಕು. ಘುಡ್ಯೆ ಉದ್ಧಾಕ ಇಟ್ಟ ಸ್ಥಳದಲ್ಲಿ ಬಂದು ಎಲ್ಲರೂ ದೇವರನ್ನು ನೆನೆದು ನಮಸ್ಕಾರ ಮಾಡುವುದು. ನಂತರ ವರನಿಗೆ ಫಲಾಹಾರ ಕೊಟ್ಟು, ಕ್ಷೌರ ಮಾಡಿಸುವುದು. ಸ್ನಾನವಾದ ನಂತರ ಲಗ್ನದ ಅಲಂಕಾರ.

**ವಧು :** ವಧುವಿಗೆ ಕಚ್ಚೆ ಹಾಕಿ ಉಡಿಸಿ, ಶೀಂಪಿ ಬೊಟ್ಟು (ಅರ್ಧ ಚಂದ್ರಾಕಾರದು) ಮಾಡಿ ಕೈಗೆ ಕಪ್ಪು ಬಳೆ ತೊಟ್ಟು ಬಲಗೈಗೆ ಮೂರು, ಎಡಗೈಗೆ ಎರಡು ಬಳೆ ಹಾಕಬೇಕು. ವಧು ತಾಯಿ ಸಹ ಕಚ್ಚೆ (18 ಮೊಳದ್ದು) ಹಾಕಿ ಉಡಬೇಕು. ತಂದೆ ಪಟ್ಟೆ ಧೋತಿ, ಶಾಲು ಹೊದ್ದು ತಲೆಗೆ ಸಣ್ಣ ರುಮಾಲು ಧರಿಸಬೇಕು. ವಧುವನ್ನು ಹೂ ಮುಡಿಸಿ, ಶೃಂಗರಿಸಿ ತನ್ನ ತಾಯಿಯೊಡನೆ ಮಂಟಪಕ್ಕೆ ಹೋಗುವಾಗ್ಯೆ ಬಲಗಾಲನ್ನು ಮೊದಲು ಮುಂದಕ್ಕಿಟ್ಟು ಹೋಗಬೇಕು. ಮಂಟಪದ ಪೂಜೆಯನ್ನು ಪುರೋಹಿತರು ಹೇಳಿದ ಹಾಗೆ ವಿಧಾನ ಮಾಡಿ, ಮುತ್ತೈದೆ ಹಿರಿಯರಿಂದ "ಕಾಂಬ್ಯಾಮಣಿ" ಅಂದರೆ ಧಾರೆಯ ಮಣಿಯನ್ನು (ಪೂಜಿಸಿ) ಮಂಟಪದ ಹೊರಗೆ ಸಭೆಯಲ್ಲಿ ಕುಳಿತ್ತಿದ್ದ ಕೆಲವು ಮುತ್ತೈದೆಯರ ಕೈ ಮುಟ್ಟಿಸಿ, ವಧುವಿನ ಅತ್ತೆ, ನಾದಿನಿಯರ ಕೈ ಮುಟ್ಟಿಸಿ ತಮ್ಮ ಕುಲದೇವರ ನೆನಪು ಮಾಡಿ ವಧುವಿನ ಕೊರಳಿಗೆ ಧರಿಸುವುದು. ಪಿಟ್ಟಾದಿವ್ಯೆ (ನಾಲ್ಕು ಗುಳಿಗಳು) ಉವಾಳಿಸಿ ಐದು ಜನ ಮುತ್ತೈದೆಯರಿಂದ ಶೇಸೆ ಹಾಕಿಸಿ ವಧುವನ್ನು ಒಳಗೆ ಕರೆದುಕೊಂಡು ಹೋಗುವುದು.

**ವರಪೂಜಾ :** ವರಪೂಜೆ ಅಂದರೆ ವಧುವಿನ ಅಕ್ಕಂದಿರಿಗೆ ಮತ್ತು ಭಾವನಿಗೆ ಕಾಲ್ತೊಳೆದು ಜನಿವಾರ ಹಾಕಿ ಉಡುಗೊರೆ ಮಾಡುವುದು. ಸೀರೆ, ಚಿನ್ನ, ರೂ. ಇಷ್ಟವಿದ್ದದನ್ನು ಕೊಡುವುದು. ಲಗ್ನದ 1 ಗಂಟೆಯ ಮೊದಲು ಎದುರು ದ್ವಾರದ ಹತ್ತಿರ ನಾಲ್ಕು ಹುಡುಗಿಯರನ್ನು ನಿಲ್ಲಿಸಿ ಹೂ, ಕುಂಕುಮ, ಗಂಧ, ಗುಲಾಬದಾನಿ ಕೊಟ್ಟು ಅತಿಥಿಗಳನ್ನು ಆದರದಿಂದ ಬರಮಾಡುವುದು.

**ನಾಣಮುಖ :** ವರನಿಗೆ ಭಾಷಿಂಗ ಧರಿಸುವುದಕ್ಕೆ ತಯಾರಿಸುವುದು. ವರನು ಅಲಂಕಾರಯುಕ್ತವಾದ ನಂತರ "ನಾಣಮುಖ"ಕ್ಕೆ ತಂದೆ ತಾಯಿ ಮತ್ತು ದೆಡ್ಡೆಯ ಒಟ್ಟಿಗೆ ಕುಳಿತುಕೊಳ್ಳುವುದು. ಇಬ್ಬರು ಮುತ್ತೈದೆಯವರು ಎರಡು ತಳಿ ತಯಾರಿಸುವುದು. 1. 'ಲಗ್ನಾ ತಳಿ', 2. 'ವತ್ಕಡೆ' ತಳಿ.

**ಲಗ್ನಾ ತಳಿಯೆಂದರೆ :** ಒಂದು ಹರಿವಾಣದಲ್ಲಿ ಲಗ್ನ ಸೀರೆಯನ್ನು ಸೆರಗು ಮೇಲೆ ಮಾಡಿ ಚಂದವಾಗಿ ಮಡಚಿ ಇಟ್ಟು ಅದರ ಮೇಲೆ ವಧುವಿನ ಮಂಗಳಸೂತ್ರ ಚಿನ್ನ, ಬಳೆಗಳನ್ನು ಇಟ್ಟು ಒಂದು ಗೇಣು ಮಲ್ಲಿಗೆ, ವೀಳ್ಯದ ಪಟ್ಟಿ-1, ಅಕ್ಷತೆ, ಬೆಳ್ಳಿಯ ಕುಂಕುಮದ ಕರಡಿಗೆ, ಕಾಡಿಗೆ ಕರಡಿಗೆ, ಬಾಚಣಿಗೆ (ಹಸ್ತಿ ದಂತದ್ದು) ಭಾಷಿಂಗ ಇವೆಲ್ಲಾ ತಳಿಯ ಮೇಲೆ ಇಡಬೇಕು. ಇದನ್ನು ವರನ ತಾಯಿ ಹಿಡಿಯುವುದು.

**ವತ್ಕಡೆ ತಳಿಯೆಂದರೆ :** ಶೇಸೆ ಮೇಲೆ ವತ್ಕಡೆ ಸೀರೆ, ಚೌತನನ ಸೀರೆ ಇಡಬೇಕು. ಇದರ ಮೇಲೂ ವೀಳ್ಯದ ಪಟ್ಟಿ-1, ಹೂ ತುಂಡು, ಅಕ್ಷತೆ, ವ್ಹಂಟಿ ಸಾಮಾನು ಇಡುವುದು. ತಳಿ ತಯಾರಾದ ನಂತರ ಪುರೋಹಿತರಿಂದ ಪೂಜಾ ವಿಧಿಯಾದ ನಂತರ "ಭಾಷಿಂಗ ಧರಿಸಿ" ಪಿಟ್ಟಾದಿವ್ವೆ ತೋರಿಸಿ ಶೇಸೆ ಹಾಕಿ ಲಗ್ನ ಮಂಟಪಕ್ಕೆ ಹೋಗಲು ಸಿದ್ಧನಾಗುವುದು. ವರನ ತಾಯಿ, ಇನ್ನೊಬ್ಬ ಮುತ್ತೈದೆ ತಳಿ ಹಿಡಿದುಕೊಳ್ಳುವುದು. ವರನ ಮಾವ ತನ್ನ ಅಳಿಯನ ಕೈಯಲ್ಲಿ ತೆಂಗಿನಕಾಯಿ ಕೊಟ್ಟು ಪ್ರೀತಿಯಿಂದ ಅವನ ಕೈ ಹಿಡಿದು (ದೆಡ್ಡೆ ಸಮೇತ) ಮಂಟಪಕ್ಕೆ ಕರೆತರುವುದು. ವರನೂ ಬಾಕಿಯವರೂ ಬಲಕಾಲು ಮಂಟಪದಲ್ಲಿ ಪ್ರಥಮವಾಗಿ ಇಡತಕ್ಕದ್ದು. ಇಬ್ಬರು ಹೆಂಗಸರು ತಮ್ಮ ಕೈಯಲ್ಲಿದ್ದ ತಳಿಗಳನ್ನು 'ವರನು' ಕುಳಿತ ಆಸನದ ಅಡಿಯಲ್ಲಿ ಜಾಗ್ರತೆಯಾಗಿ ಇಡಬೇಕು. ಎರಡೂ ಕಡೆಯವರೂ 'ಅಂತರಪಾಟು' ಎಂಬ ಬಟ್ಟೆಯನ್ನು ತಮ್ಮ ಪುರೋಹಿತರ ಹತ್ತಿರ ಕೊಡಬೇಕು.

ವಧುವಿನ ಮಾತಾಪಿತೃರು ಮಂಟಪಕ್ಕೆ ತಂದ ವರನಿಗೆ ಅರ್ಘ್ಯ ಪಾದಾದಿಗಳಿಂದ ಪೂಜಿಸಿ ಜನಿವಾರ ಹಾಕಿ ಉಡುಗೊರೆ ಕೊಡುವುದು. ನಂತರ ಅಂತರ್ಪಾಟು ಹಿಡಿದು ಪುರೋಹಿತರು ಮಂತ್ರಘೋಷದಿಂದಲೂ, ವಾದ್ಯ ಘೋಷದಿಂದಲೂ ತುಂಬಿ ನೆರೆದ ಸಭೆಯ ಎದುರಿನಿಂದ ಶೃಂಗಾರಯುಕ್ತ 'ವಧು'ವನ್ನು ತನ್ನ ಸೋದರಮಾವನು ಕೈ ಅಂದರೆ ಅಂಗುಷ್ಟ ಬೆರಳಿಗೆ ಹಿಡಿದು ಮಂಟಪದಲ್ಲಿ ಮೊದಲು ಬಲಕಾಲು ಇಟ್ಟು ಪ್ರವೇಶಿಸಿ ವಧುವಿನ ತಲೆಯ ಮೇಲೆ ಅಕ್ಷತೆ ಹಾಕಿ ಆಶೀರ್ವಾದ ಕೊಟ್ಟು ತಾನು ಹೊರಗೆ ಬರುವುದು.

ವಧೂವರರು ಒಬ್ಬರಿಗೊಬ್ಬರು ಮಾಲೆ ಹಾಕಿ ವಧುವು ಕೆಳಗೆ ಮಣೆಯಲ್ಲಿ ಕುಳಿತುಕೊಳ್ಳುವುದು. ಧಾರೆ ಎರೆಯುವ ಕಲಶದಲ್ಲಿ ಧಾರೆ ಮಿಶ್ರಿ (ಮತ್ತೆ ಅದನ್ನು ವಧುವಿಗೆ ಕೊಡಬೇಕು) ಸಣ್ಣ ಚಿನ್ನದ ಮಿಶ್ರಿ ಹಾಕಿ ಕಲಶಕ್ಕೆ ಪೂಜೆ ಮಾಡಿ ವಧುವಿನ ಮಾತಾಪಿತೃರು ಪುರೋಹಿತರು ಇತರ ಬ್ರಾಹ್ಮಣರ, ಕುಟುಂಬದ ಹಿರಿಯರ ಕಾಲುಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ನಂತರ ಮಂಟಪದಲ್ಲಿ ಬಂದು ತಮ್ಮ ಒಲವಿನ 'ಕುಮಾರಿ'ಯನ್ನು ಸಂತೋಷದಿಂದ ಧಾರೆ ಎರೆಯಬೇಕು. ವಧುವಿನ ತಾಯಿ ತನ್ನ ಪತಿಯ ಬಲಭಾಗಕ್ಕೆ ನಿಂತು ಧಾರೆ ಕಲಶವನ್ನು ಜಾಗ್ರತೆಯಿಂದ 5 ಸಾರಿ ಎರೆಯಬೇಕು. 3 ಸಾರಿ ನೀರಿನ ಧಾರೆಯ ನಂತರ ದನದ ಹಾಲಿನ ಧಾರೆ. ತಿರುಗಿ 2 ಸರ್ತಿ ನೀರಿನ ಕಲಶದ ಧಾರೆ ಪುರೋಹಿತರು ಹೇಳಿದಂತೆ ಮಾಡುವುದು. ಮಗಳನ್ನು ಕೃಷ್ಣಾರ್ಪಣ ಮಾಡಿ ಅಳಿಯನಿಗೆ ಕೊಟ್ಟ ಬಳಿಕ ವಧುವಿನ ತಂದೆಯ ಮಂಟಪದ ಕೆಲಸ ಮುಗಿಯಿತು. ಧಾರೆ ಎರೆದ ಹಾಲನ್ನು ಕೂಡಲೇ ಹೆಪ್ಪು ಹಾಕಿ ಇಟ್ಟು ಊಟದ ಸಮಯದಲ್ಲಿ ವಧೂವರರಿಗೆ ಬಡಿಸಬೇಕು.

ಲಗ್ನವಾದ ನಂತರ ವಧೂವರರು ಹಿರಿಯರಿಂದ ಆಶೀರ್ವಾದ ಪಡೆದನಂತರ ವರನ ತಾಯಿ ಇತರ ಹಿರಿಯರನ್ನು ಮಂಟಪದಲ್ಲಿ (ವಧುವಿನ ತಾಯಿ ಸಹ ಇರಬೇಕು) ಕರೆದು ಮೊದಲು ಅವರಿಂದ ವಧುವಿಗೆ ಹೂ ಕುಂಕುಮ ಕೊಟ್ಟು "ಮಂಗಳಸೂತ್ರ" ಎಂಬ ಸರವನ್ನು ಕೆಲವು ಮುತ್ತೈದೆಯರ ಕೈ ಮುಟ್ಟಿಸಿ ಇತರ ಬಳೆಗಳೂ, ಬಂಗಾರವನ್ನೂ ಹಿಡಿದು ಮೊದಲು ವರನಿಂದಲೇ ವಧುವಿನ "ಮಂಗಳಸೂತ್ರ"ವನ್ನು ಕೊರಳಲ್ಲಿ ಹಾಕಿಸುವುದು. ನಂತರ ಇತರ ಬಂಗಾರ, ಬಳೆಗಳನ್ನು ತೊಡಿಸಿ ತೊಂಡ್ಲೆ ಭಾಷಿಂಗವನ್ನು ಕಟ್ಟಿ ಲಗ್ನದ ತಳಿಯನ್ನು ವಧುವಿನ ಕೈಯಲ್ಲಿ ಕೊಟ್ಟು, ತಳಿಯಲ್ಲಿದ್ದ ಬಾಚಣಿಗೆಯಿಂದ ಸ್ವಲ್ಪ ಬಾಚಿ, ಕಿವಿಗೆ ವೇಡಿ ತಾಗಿಸಿ, ಕಾಡಿಗೆ ಹಚ್ಚಿ ಅಕ್ಷತೆಯನ್ನು ತಳಿಯಲ್ಲಿ 5 ಸಾರಿ ಹಾಕಿ ಇತರ ಹಿರಿಯರಿಂದಲೂ ಅಕ್ಷತೆಯನ್ನು ವಧುವರರಿಗೆ ಹಾಕಬೇಕು. ತಳಿಯನ್ನು ವಧುವಿನ ತಾಯಿಯ ಹತ್ತಿರ ಕೊಡಬೇಕು. ನಂತರ ಮಂಟಪದ ಹತ್ತಿರ ಇದ್ದ ಎಲ್ಲಾ ಮುತ್ತೈದೆಯರಿಗೂ ಹೂ, ಕುಂಕುಮ ಕೊಡಬೇಕು. ಮಂಟಪದಲ್ಲಿ ಹತ್ತಿರ ಇದ್ದ ಎಲ್ಲಾ ಮುತ್ತೈದೆಯರಿಗೂ ಹೂ, ಕುಂಕುಮ ಕೊಡಬೇಕು. ಮಂಟಪದಲ್ಲಿ ಕೆಲಸ ಮಾಡುವಾಗ ವಧುವಿನ ಸೋದರತ್ತೆಯನ್ನು ಅಗತ್ಯವಾಗಿ ಕರೆಯಬೇಕು. ಶೇಸೆ ಹಾಕಿ ಆರತಿ ಮಾಡುವುದು. ವಧುವರರು ಕಂಕಣ ಕಟ್ಟಿದ ನಂತರ ವಧುವಿನ ತಾಯಿಯಿಂದ ಅಗ್ನಿ ತರಿಸಿ ಹೋಮ ಪ್ರಾರಂಭಿಸುವುದು. (ವಧುವಿನ ತಾಯಿಗೆ ಬೀಗರಿಂದ ಉಡುಗೊರೆ ಉಂಟು). ಇದಕ್ಕೆ "ಅಗ್ನಿ ಉಡುಗೊರೆ" ಎನ್ನುತ್ತೇವೆ. ಈ ಹಣ ಪುನಃ ವಧುವಿಗೆ ಕೊಡುವುದು. ಈ ಹೋಮ ಆಗುವಾಗ್ಯೆ ವಧುವಿನ ಅಣ್ಣ ತಮ್ಮಂದಿರು ಸೋದರಮಾವನವರು ಮಂಟಪದಲ್ಲಿ ಬಂದು "ಲಾಯಿವಿರ್ಕಾಚಿ" ಎಂಬ ಕ್ರಮವನ್ನು ಪುರೋಹಿತರು ಹೇಳಿದ ಹಾಗೆ ಮಾಡಿ ನಂತರ ಸೋದರಮಾವನಿಂದ ವಧುವಿನ ಬಲಕಾಲನ್ನು ಸಾಣೆಕಲ್ಲಿನ ಮೇಲೆ ಇಟ್ಟು ಕಾಲುಂಗುರವನ್ನು ಹಾಕಬೇಕು. ನಂತರ ಇನ್ನೊಂದು ಕಾಲಿನ ಬೆರಳಿಗೆ ಹಾಕುವುದು. "ಲ್ಯಾಯ ಶಾಲ್" ಹಿರಿಯ ಸೋದರಮಾವನ ಬಲಭುಜದಲ್ಲಿಟ್ಟು ಕ್ರಮ ಪ್ರಕಾರ ಎಲ್ಲರ ಬಲಭುಜದ ಮೇಲಿಟ್ಟು ವಧುವಿನ ತಮ್ಮನಿಗೆ ಉಡುಗೊರೆಯಾಗಿ ಕೊಡುವುದು. ವಧುವರರಿಬ್ಬರೂ ಸೋದರಮಾವ, ಅಣ್ಣಂದಿರ ಕಾಲುಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆಯುವುದು.

"ಸಪ್ತಪದಿ" ಸಪ್ತರಾಶಿ ಮೆಟ್ಟಿ ; ಶಾಸ್ತ್ರೋಕ್ತ ವಿಧಿಯಾದ ನಂತರ ಶೇಸಾರತಿಯಾಗಿ ವಧುವರರು ಕೈ ಕೈ ಹಿಡಿದು ಹಸೆಗೆ ಹೋಗಿ (ಒಂದು ಹಾಸಿಗೆ ಅಲ್ಲಿ ಮಡಚಿ ಇಡಬೇಕು) ಅಲ್ಲಿ ವಧುವಿನ ಕೈಯಿಂದ ಹಾಸಿಗೆಯನ್ನು ಬಿಡಿಸಿ ವಿಧಿ ಮಾಡಿ, ಇಬ್ಬರೂ ಹಾಸಿಗೆಯಲ್ಲಿ ಕುಳಿತುಕೊಳ್ಳುವುದು. ಒಬ್ಬರನ್ನೊಬ್ಬರು ನೋಡುವುದು (ಮುಖಾವಲೋಖನ ನಂತರ "ಕೇಳೆ ಪೊಟೊಚೆ" ಅಂದರೆ ಒಬ್ಬರಿಗೊಬ್ಬರು ಬಾಳೆಹಣ್ಣು ತಿನ್ನಿಸುವುದು. ನಂತರ ಶೇಸೆ ಆರತಿ ಮಾಡಿ ಅಲ್ಲಿಯೇ ಹಾಲು ತಿಂಡಿಕೊಟ್ಟು ಮತ್ತೆ ತಳ ವಿಸರ್ಜನೆ ಮಾಡಿ ಪುನಃ ಮಂಟಪದ ಹತ್ತಿರ ಬರುವುದು.

## ಚೌತನನ

ವಧುವರರು ಮಂಟಪದ ಹೊರಗೆ ಬಂದು ನಿಲ್ಲುವುದು. ಸೋದರಮಾವ ಮತ್ತು ಅತ್ತೆಯವರಿಂದ ಚೌತನನ ಮಾಡಿಸುವುದು. ಸೋದರಮಾವ ವರನನ್ನೂ, ಅತ್ತೆಯು ವಧುವನ್ನೂ ಕೈಯಿಂದ ಹಿಡಿದು ನಾಲ್ಕು ಹೆಜ್ಜೆ ಹಿಂದೆ ಮುಂದಕ್ಕೆ ತರುವುದು. ಹಾಗೆಯೇ ಹಿಂದಕ್ಕೆ ತರುವುದು ಮೊದಲಿನ ಸ್ಥಳದಲ್ಲಿ ನಾಲ್ಕುಜನರೂ ಸಾಲಾಗಿ ನಿಲ್ಲುವುದು. 8 ಪಿಟ್ಟಾದಿವ್ವೆ ಬೆಳಗಿಸಿ ಸಾಲಾಗಿ ಅವರ ಎದುರು ಇಡುವುದು ಮತ್ತೆ ಬೇರೆ 4 ಪಿಟ್ಟಾದಿವ್ವೆ 8 ಗುಳಿಗೆಗಳನ್ನು ಹರಿವಾಣದಲ್ಲಿ ಇಟ್ಟು ಬೆಳಗಿಸಿ ಹಿರಿಯರಿಂದ ಆರತಿ ಮಾಡಿಸುವುದು. ಇತರ ಹೆಂಗಸರು ಸಹಾ ಶೇಸೆ ಆರತಿ ಮಾಡುವುದು. ಸೋದರತ್ತೆ ಅಗತ್ಯವಾಗಿ ಶೇಸಾರತಿ ಮಾಡಬೇಕು. ಸೋದರಮಾವ, ಅತ್ತೆಗೆ, ವಧುವಿನ ತಂದೆ ತಾಯಿ ಉಡುಗೊರೆ ಕೊಡಬೇಕು. ನಂತರ ವಧುವರರು ಮಂಟಪಕ್ಕೆ ಬರುವುದು. ನಂತರ ಪುನಃ **ಚೌತನನ ಧಾರೆ :** ವಧುವಿನ ತಂದೆ ತಾಯಿ ಪುನಃ ವಧುವರನ ಕಾಲ್ತೊಳೆದು ಇಬ್ಬರಿಗೂ ಉಡುಗೊರೆ ಮಾಡಿ "ಧಾರೆ ಎರೆಯಬೇಕು" ಇದಕ್ಕೆ ಚೌತನನ ಧಾರೆ" ಎನ್ನುತ್ತೇವೆ. ಈ ಧಾರೆಯಾದ ನಂತರ ವಧುವು ಪತಿಗೋತ್ರದಲ್ಲಿ ಸೇರುವುದು. ಸೋದರತ್ತೆಯಿಂದ ಹೂ ಕುಂಕುಮ ಕೊಟ್ಟು "ಬೊವಾನ್ತಳಿ" ಎಂಬ ಸೀರೆಯನ್ನು ಉಡುಗೊರೆ ಮಾಡುವುದು. (ಚಿನ್ನ ಸಹಾ ಕೊಡುತ್ತಾರೆ). ಅತ್ತೆಯಿಂದ ಚೌತನನ ತಳಿ ಉಡುಗೊರೆಯಾಗಿ ಪಡೆದು ವಧು ಮನಾತ್ರ ಒಳಗೆ ಹೋಗಿ ಲಗ್ನದ ಸೀರೆ ಉಟ್ಟು ಸೆರಗು ಮೇಲೆ ಹಾಕದೆ ಅಡ್ಡ ಕೈಯಲ್ಲಿ ಇಟ್ಟು ಮಂಟಪಕ್ಕೆ ಬರಬೇಕು. ಅತ್ತೆಯಿಂದ ಕಚ್ಚೆ ಹಾಕಿ, ಸೆರಗು ಹಾಕಿಸಿ, ಶಿಂಪಿ ಬೊಟ್ಟು ತೆಗೆದು ಉರುಟು ಕುಂಕುಮ ಬೊಟ್ಟು ಮಾಡುವುದು. ವರನಿಂದ 7 ಬಗೆಯ ಹೂಗಳನ್ನು ವಧುವಿಗೆ ಮುಡಿಸಿ ಅವರ ಸೆರಗಿಗೆ 5¼ ರೂ. ಗಟ್ಟಿಮಾಡಿ ಕಟ್ಟಿಸಬೇಕು. ಇದಕ್ಕೆ 'ಪತ್ತಾ ಬಾಂದುಚೆ' ಎನ್ನುತ್ತೇವೆ. ಮದುವೆಯ ಮುಂಚೆ ವರನು ಸ್ವೇಚ್ಛೆಯಾಗಿ ಖರ್ಚು ಮಾಡುತ್ತಿದ್ದನು, ಆದರೆ ಇನ್ನು ಮುಂದೆ ಜಾಗ್ರತೆಯಿಂದ ಖರ್ಚು ಮಾಡಿ ಉಳಿತಾಯವನ್ನು ನಿನ್ನ ಹತ್ತಿರ ಕೊಡುತ್ತೇನೆ ಎಂದು ಹೇಳಿ ಈ ಹಣವನ್ನು ಎಲ್ಲರ ಎದುರಿಗೆ ಪತ್ನಿಯ ಸೆರಗಿಗೆ ಕಟ್ಟುವುದು. (ಆಗಿನ ಕಾಲದಲ್ಲಿ ಪರ್ಸ್, ಪ್ಯೊಕೆಟ್, ಬ್ಯಾಂಕ್ ಇರಲಿಲ್ಲ. ಪತ್ನಿಯೇ ಟ್ರೆಜರರ್ ಆಗಿದ್ದಳು).

**ನಾಗಓಲೆ :** 'ನಾಗಓಲೆ' ಅಂದರೆ (ಘಡ್ಯೆ ಉದ್ಧಾಕ) ಇಟ್ಟ ಸಣ್ಣ ಕಠಾರವನ್ನು ಮಂಟಪದಲ್ಲಿ ತಂದು ಅದಕ್ಕೆ ಮಣೆ ಮುಚ್ಚಿ ಅದರ ಮೇಲೆ ಬಾಳೆಎಲೆ ಇಟ್ಟು ಸಣ್ಣ ನಾಗ ಮಾಡಿ ಇಡುವುದು. ವಧೂವರರು ಭಾಷಿಂಗ ತೆಗೆದು ಕಂಕಣವನ್ನು ತೆಗೆದು ಮಣೆಯ ಮೇಲೆ ಇಟ್ಟು ನಾಗನನ್ನು ಪೂಜಿಸಿ ವಧುವರರಿಗೆ ತೋರಿಸದೆ ಅಡ್ಡ ಮಾಡಿ ನಾಗಪಾತಾಳಕ್ಕೆ ಅಂದರೆ ಕಠಾರದಲ್ಲಿ ಹಾಕುವುದು. ಅದರ ನೂಲನ್ನು ಮುತ್ತೈದೆಯರಿಗೆ ಹಂಚುವುದು.

**ವಧುವಿನ ಅಡಿಗೆ :** ವಧುವಿನ ಅಡಿಗೆ ಎಂದು 5 ಬಾಳೆಹಣ್ಣು ಚಿಕ್ಕ ಚಿಕ್ಕ ತುಂಡುಗಳಾಗಿ ಮಾಡಿ ಬಾಳೆಎಲೆಯಲ್ಲಿ ಇಟ್ಟು ಮೊದಲು ಪತಿಗೆ, ಅತ್ತೆ, ನಾದಿನಿ, ತಾಯಿ, ಸೋದರತ್ತೆ, ಅಕ್ಕ ಇತರ ಮುತ್ತೈದೆಯರಿಗೆ ಹಂಚುವುದು. ನಂತರ ಪ್ರಸ್ತ ಶಾಸ್ತ್ರದ ಹೋಮ. ಇದಕ್ಕೆ

ವಧುವಿನ ತಂದೆ ಇಬ್ಬರಿಗೂ ಉಡುಗೊರೆ ಮಾಡುವುದು. ನಂತರ ಮಡಿಲು ತುಂಬಿಸುವು ಮೊದಲು ತಾಯಿಕಡೆಯವರು ಮಡಿಲು ತುಂಬಿಸಿ ಅದನ್ನು ಜಾಗ್ರತೆಯಾಗಿ ತಾಯಿ ಮನೆ ಅಕ್ಕಿ ಮಡ್ಕಿ (ಗುಡಾಣ)ಯಲ್ಲಿ ಇಡಬೇಕು. ನಂತರ ಅತ್ತೆ ತುಂಬಿಸಿದ ಮಡಿಲು ವ್ಯಾಂಟಿಯ ಹಾಗೇ ಹಿಡಿಯಬೇಕು. ಮತ್ತೆ ಎಲ್ಲರೂ ಶೇಸೆ ಆರತಿ ಮಾಡಬೇಕು. ಈಗ ವಧುವು ಪತಿ ಸಾರಿ 'ಆರತಿ' ಮಾಡಬೇಕು. ಅಕ್ಷತೆಯನ್ನು ಪತಿಯ ಕಾಲಲ್ಲಿ ಹಾಕಿ ನಮಸ್ಕರಿಸಿ ಪತಿಯಿ ಉಡುಗೊರೆ ತೆಗೆದುಕೊಳ್ಳಬೇಕು. ವಧುವರರು ಕಳಶ, ಹೂ, ಕುಂಕುಮ ಹಿಡಿದು ತು ಹತ್ರ 'ವೃಂದಾಮಾತೆ'ಗೆ 5 ಸಾರಿ ನೀರು ಹಾಕಿ ಹೂ, ಕುಂಕುಮ ಇಟ್ಟು 5 ಪ್ರದಕ್ಷಿಣೆ ತೆಗ ಸೂರ್ಯ ದೇವರಿಗೆ ನಮಸ್ಕರಿಸಬೇಕು. ಹೀಗೆ ನಿತ್ಯವೂ ಬೆಳಿಗ್ಗೆ ಸ್ನಾನ ಮಾಡಿ ತುಳಸಿ ಪೂ ಮಾಡಬೇಕು. ಇಬ್ಬರೂ ಕಲ್ಪವೃಕ್ಷಕ್ಕೆ ನೀರು ಹಾಕಬೇಕು. ನಂತರ ಬಾಗಿಲ ಧೊರ್ಚೆ.

**ಬಾಗಿಲ ಧೊರ್ಚೆ:** ಆ ವಿಧಿಯನ್ನು ವಧುವಿನ ಪತಿ ಮನೆಯಲ್ಲಿಯೂ ಮಾಡುತ್ತಾ ಇದಕ್ಕೆ 'ಮನೆ ತುಂಬಿಸುವುದು' ಎನ್ನುತ್ತೇವೆ. ಮುಂದಾಗುವ ನೆಂಟಸ್ತಿಕೆ ವಿಷಯದಲ್ಲಿ ತಮ್ಮಂದಿರೊಂದಿಗೆ ಜರಗುವ ಸಂವಾದ. ಬಾಗಿಲು ತಡೆಯುವುದು ಈ ವಿಧಾನ ಆದ ನಂ ಅಕ್ಕ ತಂಗಿಯರಿಗೆ ಉಡುಗೊರೆ. ವಧುವಿಗೆ ಅತ್ತೆಯಿಂದ ಬಲಕಿವಿಯಲ್ಲಿ 5 ಬಾರಿ ಹೆಸ ಕರೆದು ಉಡುಗೊರೆ. ವಧುವಿಗೆ ಅತ್ತೆಯಿಂದ ಬಲಕಿವಿಯಲ್ಲಿ 5 ಬಾರಿ ಹೆಸರು ಕರೆ ಉಡುಗೊರೆ ಪಡೆದು ಮಿಠಾಯಿ ಹಂಚಿ 'ಓಕುಳಿ ಆಡಿ' ಉಂಗುರ ಪಡೆದು ಬಾಗಿಲು ಬಿ ಒಳಗೆ ಹೋಗಿ ದೇವರಿಗೆ ನಮಸ್ಕಾರ ಮಾಡಿ ಹಿರಿಯರೆಲ್ಲರ ಕಾಲು ಮುಟ್ಟಿ ನಮಸ್ಕರಿಸುವು. ಮಂಟಪದ ಕಾರ್ಯವಿಸರ್ಜನೆ ಮಾಡಿ ಬಂದ ಬ್ರಾಹ್ಮಣರಿಗೆಲ್ಲಾ ಎರಡೂ ಕಡೆಯವ ಸಮಪಾಲು ಹಣ ಹಾಕಿ ಭೂರಿ ದಕ್ಷಿಣೆ ಕೊಡುವುದು. ಭೋಜನವಾದ ನಂತರ ಭೋಜ ದಕ್ಷಿಣೆ ಕೊಡುವುದು.

## ಊಟ

ವಧುವರರು, ತಂದೆತಾಯಿ, ಅತ್ತೆಮಾವ, ಸೋದರಮಾವ, ಅತ್ತೆ, ಪುರೋಹಿತ ಅಕ್ಕ ತಂಗಿಯರು ಊಟಕ್ಕೆ ಕುಳಿತುಕೊಳ್ಳುವುದು. ಎಲೆ ಬಡಿಸಿದ ಕೂಡಲೆ ವಧುವಿನ ತುಪ್ಪವನ್ನು ವರನಿಗೆ 1 ಸಾರಿ ಬಡಿಸಬೇಕು. ಅತ್ತೆ ಮಾವ ಬಾಕಿಯವರಿಗೂ ಬಡಿಸಬೇ ಈ ಎಂಟು ಮಂದಿಗೂ ಎರಡು ಬಗೆಯ ಮಿಠಾಯಿ ಬಡಿಸಬೇಕು. ನಂತರ ಊಟ. ಧಾ ಎರೆದ ಹಾಲಿನ ಹೆಪ್ಪು ಮಜ್ಜಿಗೆಯನ್ನು ನೆನಪಿನಿಂದ ವಧುವವರಿಗೆ ಬಡಿಸಬೇಕು. ವರ ಊಟದ ಸಮಯ ತನ್ನ (ಉಷ್ಟೆ) ಎಂಜಲು ಪದಾರ್ಥ ಅಥವಾ ಸಿಹಿ ಉಂಡೆಯನ್ನು ವಧುವಿ ತಿನ್ನಿಸುವುದು. (ಹಿಂದೆ ವರನ ಊಟವಾದ ನಂತರ ಅವನ ಎಲೆಯಲ್ಲಿಯೇ ವಧು ಊ ಮಾಡುವ ಕ್ರಮ ಇತ್ತು) ನಂತರ ವಧುವು ಉಷ್ಟೆ ಉಡ್ಗಿರೆ ಪಡೆಯುವುದು.

ರುಚಿಕರವಾದ ಭೋಜನದ ನಂತರ ಎರಡೂ ಕಡೆಯವರು ಒಬ್ಬರಿಗೊಬ್ಬರು ಮಡಿಲು (ವ್ಹಂಟಿ) ತುಂಬಿಸುವುದು. ಕುಂಕುಮ, ಹೂ, ಕೊಟ್ಟು ಬೈತಲೆಗೆ ಕುಂಕುಮ ತಾಗಿಸಿ ತೆಂಗಿನಕಾಯಿ ಸೆರಗಿನಲ್ಲಿಟ್ಟು ಅಕ್ಷತೆ ಹಾಕುವುದು (ಸಣ್ಣವರಾದರೆ ತಲೆಯ ಮೇಲೆ ಅಲ್ಲ, ಕಾಲಿನ ಮೇಲೆ ಅಕ್ಷತೆ ಹಾಕುವುದು). ನಂತರ ಬೀಗರಿಗೆ ಕಾಫಿ ಕೊಟ್ಟು ವರನ ತಂದೆ-ತಾಯಿ ವಧುವಿನ ತಂದೆ ತಾಯಿ ಹಾಲು, ಸಕ್ಕರೆ, ಸೀರೆ, ಧೋತಿ, ರೂ. ಉಡುಗೊರೆ ಅದಲು ಬದಲು ಮಾಡುವುದು. ಹಣದ ರೂಪದಲ್ಲಿ "ವಿಡೊ" ಕೊಡಬೇಕು. ಅಡಿಗೆಯವರಿಗೆ, ವಾದ್ಯದವರಿಗೆ, ಕೆಲಸ ಮಾಡುವವರಿಗೆ ಬೀಗರು ಬಕ್ಷಿಸ್ ಕೋಡಬೇಕು. ವಧುವರರು ಪುರೋಹಿತರ ಹಿರಿಯರ ಆಶೀರ್ವಾದ ಪಡೆಯುವುದು. ಮಾತಾಪಿತೃರಿಂದ ಆಶೀರ್ವಾದ ಪಡೆದು ತನ್ನ ಪ್ರೀತಿಯ ಕುವರಿಯನ್ನು ಪತಿಗೃಹಕ್ಕೆ ಕಳುಹಿಸುವಾಗ್ಯೆ ಬೇಸರಿಸದೆ ಜನಕರಾಜನ ಉಪದೇಶವನ್ನು ತಿಳಿಸಿ (ಮಗಳೇ ಜಾನಕಿ, ನಿನ್ನ ಸುಗುಣ ಸನ್ಮೋಹನ್ನಖಗಕುಲರನ್ನು ಮನೋರಮಣಿ) ಹೀಗೆ ಹೇಳಿ ಸಂತೋಷದಿಂದ ಕಳುಹಿಸಿಕೊಡಬೇಕು.

ಬೀಗರಿಗೆ (ಸ್ಕ್ಯೊಯ್ರಾಂಕ) ಎಲ್ಲಾ ಬಗೆಯ ಮಿಠಾಯಿ ತಿಂಡಿ ಪ್ಯಾಕ್ ಮಾಡಿ ಕೊಡಬೇಕು. ವಧುವಿನ ತಾಯಿ ತನಗೆ ಕೊಟ್ಟ (ಅಗ್ನಿ ಉಡ್ಗಿರೆ) ಹಣವನ್ನೂ, ವಧುವಿಗೆ ಸಿಕ್ಕಿದ ಉಡುಗೊರೆ ಹಣವನ್ನೂ ಬೀಗರ ಹತ್ತಿರ ಕೊಟ್ಟು ಕುಮಾರಿಯನ್ನು 'ಪತಿಗೃಹಕ್ಕೆ' ಕಳುಹಿಸುವಾಗ ಬೇಸರಿಸದೆ ಸಂತೋಷದಿಂದ ಕಳುಹಿಸಬೇಕು. ಮಗಳ ಒಟ್ಟಿಗೆ ತಾಯಿ ಹೋಗುವ ಕ್ರಮ ಉಂಟು. ಒಂದು ವೇಳೆ ಅಸಾಧ್ಯವಾದರೆ ಅಕ್ಕ ಅಥವಾ ಅತ್ತಿಗೆ ಹೋಗಬಹುದು. ದೇವಕಾರ್ಯದ ನಂತರ ವಧುವರರನ್ನು ಕರೆದು ತರಲು ತಂದೆ ತಾಯಿ ಹೂ ಮಿಠಾಯಿಯೊಂದಿಗೆ ಹೋಗಬೇಕು. ತಮ್ಮ ಅಳಿಯ ಮಗಳನ್ನು ನಾಲ್ಕು ದಿನ ನಿಲ್ಲಿಸಿ 'ಮಧುಚಂದ್ರಕ್ಕೆ' ಹನಿಮೂನ್ ಹೋಗುವುದು. ಇಲ್ಲಿಗೆ ಮದುವೆ ಮಂಟಪದ ಕಾರ್ಯ ಸಮಾಪ್ತ.

## ವಾಯ್ನ ಪೂಜೆ

**ವಾಯ್ನ ತಯಾರಿಸುವ ವಿಧಾನ :** ವಾಯ್ನದ ಕಾಯಿ (ತೆಂಗಿನಕಾಯಿ) ನಯವಾಗಿ ಶುಚಿಮಾಡಿ ವಾಯಾಣದ ಕಾಯಿಯನ್ನು ಅರಸಿನ ನೀರಿನಲ್ಲಿ ತೊಳೆದು ಶೇಡಿ ಅಥವಾ ಚೋಕು ತುಂಡಿನಿಂದ ಸುತ್ತ ಗೀಟಿ ಹಾಕಬೇಕು. ಕಾಯಿಯ ಎರಡು ಕಣ್ಣುಗಳಿಗೆ ಕಾಡಿಗೆಯನ್ನು ಚಂದಮಾಡಿ ಹಚ್ಚಬೇಕು. ಕಾಯಿಯ ಎರಡು ಕಣ್ಣುಗಳಿಗೆ ಕಾಡಿಗೆಯನ್ನು ಚಂದಮಾಡಿ ಹಚ್ಚಬೇಕು. ಉಳಿದ ಒಂದು ಕಣ್ಣಿಗೆ ಸಿಂಧೂರ ಹಚ್ಚಬೇಕು. ಎರಡು ಕಣ್ಣುಗಳ ಮಧ್ಯೆ ಸ್ವಲ್ಪ ಮೇಲೆ ಕುಂಕುಮದ ಬೊಟ್ಟು ಮಾಡಿ ಸ್ವಲ್ಪ ಮೇಲೆ ಗಂಧದ ನಾಮ ಮಾಡಬೇಕು. (ಆಗ ದೇವಿಯ ಮುಖದ ಹಾಗೆ ಕಾಣುತ್ತದೆ). ಮದುವೆ ಸಮಯದಲ್ಲಿ 101 ಅಥವಾ 51 ವಾಯ್ನ ಪೂಜಿಸುವ ವಾಡಿಕೆ.

**ಮಾಡುವ ಕ್ರಮ :** ತುದಿಯ ಬಾಳೆಎಲೆ ಒಂದನ್ನು ನಮ್ಮ ಕಡೆ ಎದುರು ಮಾಡಿ ಅದರ ಮೇಲೆ ಐದು, ಏಳು ಅಥವಾ ಒಂಬತ್ತು (5,7,9) ವಾಯ್ನವನ್ನು ಒಂದೊಂದು ಮುಷ್ಠಿ ಬೆಳ್ತಿಗೆ ಅಕ್ಕಿಯನ್ನು ಹಾಕಿ ಅದರ ಮೇಲೆ ಸ್ವಲ್ಪ ಸ್ವಲ್ಪ ದೂರದಲ್ಲಿ ಇಡಬೇಕು. ಅದರ ಹತ್ತಿರ ವೀಳ್ಯದ ಪಟ್ಟಿ-1, ಗಂಟು ಇದ್ದ ಕಬ್ಬಿನ ತುಂಡು-1, ದೇವಬಾಳೆಹಣ್ಣು-1, ಪಿಂಗಾರ ಹೂವಿನ ಎಸಳುಗಳು-2. ಹೀಗೆ ಪೂಜಿಸುವ 7,9,11, ವಾಯ್ನಗಳ ಮೇಲೆ ಬೆಳ್ಳಿ ಅಥವಾ ಹಿತ್ತಾಳೆ, ಮಣ್ಣಿನ ಹಣತೆ ಬೆಳಗಿಸಿ ಇಡಬೇಕು. ಎಲೆಯ ತುದಿಯಹತ್ತಿರ ವಾಯ್ನದಾರ, ವಾಯ್ನ ಸಾಮಾನು, ಮುಳ್ಳು ಸೌತೆ-1 ಇಡಬೇಕು. ವಾಯ್ನಗಳನ್ನು ಎರಡು ಬಾಳೆಎಲೆಯಲ್ಲಿ ಇಡಬಹುದು. ಉಳಿದ ವಾಯ್ನಗಳನ್ನು ಹೊಸ ಬುಟ್ಟಿಯಲ್ಲಿಟ್ಟು ಒಂದರ ಮೇಲೆ ಹಣತೆ ದೀಪ ಬೆಳಗಿಸಿ ಇಡಬೇಕು.

**ಮಗಳಿಗೆ ಕೊಟ್ಟಲ್ಲಿ ವಾಯ್ನ ಪೂಜೆ ಇದ್ದಲ್ಲಿ ಶ್ರೀ ಗೌರಿ ಪೂಜೆಗೆ ಮಾಡುವ ತಯಾರಿ :**

ಕುಂಕುಮ, ಕಾಡಿಗೆ, ಸಿಂಧೂರ, ಗಂಧ, ಕಬ್ಬು ತುಂಡುಗಳು, ವೀಳ್ಯದ ಪಟ್ಟಿ, ಎಳತು ಅಡಿಕೆ, ಮುಳ್ಳುಸೌತೆ, ಹಣ್ಣುಕಾಯಿ, ಪಿಂಗಾರ ಹೂ, ಅಬ್ಬೊಲಿಗೆ ಹೂ, ಮಲ್ಲಿಗೆ ಹೂ, ನೈವೇದ್ಯಕ್ಕೆ 'ಅವಲಕ್ಕಿ ಕಜ್ಜಾಯ' ಗೌರಿ ಮಾತೆಗೆ ವ್ಹಂಟಿ ಅಂದರೆ ಬಾಳೆಹಣ್ಣು-5, ತೆಂಗಿನಕಾಯಿ-1, ವೀಳ್ಯದ ಪಟ್ಟಿ, ರವಕೆ ಖಣ, ವ್ಹಂಟಿ ಸಾಮಾನು, ಕುಂಕುಮ, ಸ್ವಲ್ಪ ಚಿಲ್ಲರೆ ದುಡ್ಡು, ಹೂ ಎಲ್ಲವನ್ನೂ ಒಂದು ಹರಿವಾಣದಲ್ಲಿ ಇಟ್ಟು ಮಾತೆಗೆ ಸಮರ್ಪಿಸುವುದು. ವರನಿಂದ ಆರತಿ ಮಾಡಿಸಿ ಹಣ್ಣುಕಾಯಿ ಹಿಡಿದು ಪುರೋಹಿತರಿಂದ ಪ್ರಾರ್ಥನೆ ಮಾಡಿ ಪ್ರಸಾದ ಹಿರಿಯರಿಂದ ಪಡೆದುಕೊಂಡು ಆಶೀರ್ವಾದ ಪಡೆಯುವುದು. ಪ್ರಥಮವಾಗಿ ಕುಲದೇವರಿಗೆ ವಾಯ್ನ ಸಮರ್ಪಿಸಿ ನಂತರ ಪುರೋಹಿತರಿಗೆ ಕೊಟ್ಟು, ಮದುವೆಗೆ ಬಂದ ಮುತ್ತೈದೆಯರಲ್ಲಿ ತಂದೆ ತಾಯಿ ಅತ್ತೆ ಮಾವ ಇದ್ದವರಿಗೆ ಮೊದಲು ಮಂಟಪದಲ್ಲಿ ಕುಳ್ಳಿರಿಸಿ ದೀಪ ಬೆಳಗಿಸಿಟ್ಟ ವಾಯ್ನವನ್ನು ಜಾಗ್ರತೆಯಿಂದ ಎರಡೂ ಕೈಯಿಂದ ಹಿಡಿದು ಕೊಡಬೇಕು. ಕಾಲು ಮುಟ್ಟಿ ನಮಸ್ಕರಿಸಬೇಕು. ಮತ್ತೆ ಪತಿಗೆ ಕೊಟ್ಟು ಆಶೀರ್ವಾದ ಪಡೆಯುವುದು. ತಾಯಿ, ಅತ್ತೆ, ಸೋದರತ್ತೆಗೆ ಕೊಡುವಾಗ ಹಣ ರೂ. 5 ಪಡಕೊಳ್ಳಬೇಕು. ಗೌರಿಪೂಜೆ ಆದ ಕೂಡಲೆ ವಾಯ್ನದಾರವನ್ನು ಪತಿಯ ಹತ್ತಿರ ಕೊಟ್ಟು ವಧುವು ತನ್ನ ಕೊರಳಲ್ಲಿ ಧರಿಸಬೇಕು. ಬೀಗರು 5 ವಾಯ್ನವನ್ನು ವಧುವಿನ ತಾಯಿ ಮನೆಯವರಿಗೆ ಕೊಡಬೇಕು. ಈ ಪೂಜೆಯನ್ನು ಪ್ರತಿ ವರ್ಷ ಬಾದ್ರಪದ ಶುಕ್ಲ ಪಕ್ಷದ ತೃತೀಯ ದಿನದಲ್ಲಿ ಮಾಡುವುದು. (ಚೌತಿಯ ಮುಂಚಿನ ದಿನ) ಹೊಸ ವರ್ಷದ 'ಗೌರಿ ಪೂಜೆಗೆ' ತಾಯಿ ಮನೆಯವರು ಎಲ್ಲಾ ಪೂಜೆಯ ಸಾಹಿತ್ಯವನ್ನು ಕೊಡಬೇಕು. ಮಗಳ ಮನೆಗೆ 51 ಅಥವಾ 101 ತೆಂಗಿನಕಾಯಿ, ಕಬ್ಬು ಕಟ್ಟು-1, ಹಣತೆ-11, ವಾಯ್ನ ಸಿಂಗರಿಸಲು ಕುಂಕುಮ, ಕಾಡಿಗೆ, ಸಿಂಧೂರ, ವ್ಹಂಟಿ ಸಾಮಾನು, ಬಾಳೆಹಣ್ಣು-5, ತೆಂಗಿನಕಾಯಿ-1, ರವಕೆಖಣ-1, ಪಿಂಗಾರ-1, ಹಸಿ ಅಡಕೆ, ಮುಳ್ಳು ಸೌತೆ ಅಗತ್ಯಬೇಕು.

# ಶ್ರೀ ಸತ್ಯ ನಾರಾಯಣ ಪೂಜೆ



**ಬೇಕಾದ ಸಾಮಾಗ್ರಿಗಳು :** ಕಲಶಕ್ಕೆ ಬೆಳ್ಳಿದ್ದು ಅಥವಾ ತಾಮ್ರದ ಚಂಬು 5,6 ಹರಿವಾಣಗಳು, ಶೃಂಗರಿಸಿದ ಕಾಲುದೀಪ 1, ಕುರ್ಚಿ ಅಥವಾ ಸಣ್ಣ ಮಂಚ ತೊಳೆದು ಅದರ ಕಾಲಿಗೆ ಸಣ್ಣ ಬಾಳೆಗಿಡ ಎರಡನ್ನು ಕಟ್ಟಬೇಕು. ಮಾವಿನ ಎಲೆಯ ಗೊಂಚಲು ಬೇಕು, ಬೆಳ್ಳಿಯ ಬಟ್ಟಲು ಅಥವಾ ಹರಿವಾಣದಲ್ಲಿ 1¼ ಕೆಜಿ ಗೋಧಿ, ವೀಳ್ಯದ ಪಟ್ಟಿ-5, ತಟ್ಟೆ ಚಿಪ್ಪುಟ, ಮಣೆಗಳು-4, ಪಟ್ಟೆ ವಸ್ತ್ರ, ಪಂಚಾಮೃತ, ಶಿಯಾಳ, ಹಣ್ಣುಕಾಯಿ-1, ಫಲವಸ್ತುಗಳು, ನೈವೇದ್ಯಕ್ಕೆ 'ಸಪಾತು', ನಿರೀಕ್ಷಣೆ (ಅಂದರೆ ಕಲ್ಲು ಸಕ್ಕರೆ, ಬಾದಾಮು, ದ್ರಾಕ್ಷಿ, ಗೇರುಬೀಜ, ಖಾರೂಖ ಇಂತಹ 5 ಬಗೆದ್ದು), ದಾನ ಕೊಡಲು 7 ಬಗೆ ಫಲವಸ್ತು (ಕುಂಬಳಕಾಯಿ-1, ಅನನಾಸು, ಲಿಂಬೆ-2, ಮುಸುಂಬಿ-2, ಪೇರಳೆ-2, ನೇಂದ್ರಬಾಳೆಹಣ್ಣು-2, ಸೇಬು (ಎಪ್ಪಲ್)-2, ಮಾವಿನಹಣ್ಣು) ಕಲಶಕ್ಕೆ ಉಡಿಸಲು ಕೆಂಪು ವಸ್ತ್ರ, ಚಿನ್ನದ ಸರ, ದೇವಬಾಳೆ ಹಣ್ಣು-16, ತೆಂಗಿನಕಾಯಿ-5, ಬೆಳ್ತಿಗೆ-3 ಕೆ.ಜಿ., ಬಾವಿ ಅಥವಾ ಪೈಪಿನ ಹತ್ತಿರ ಗಂಗೆ ಪೂಜೆಗೆ ಆರತಿ-1, ದೊಡ್ಡ ಕೊಡಪಾನ-1, ಕಲಶದಲ್ಲಿ ಹಾಕಲು ಲಿಂಬೆ-1, ಕೇಸರಿ, ಸ್ವಲ್ಪ ಅಷ್ಟಗಂಧ, ಅಗರಬತ್ತಿ, ಶಂಖ, ಜಾಗಟೆ. ಗಂಗೆ ಪೂಜೆ ಮಾಡಿ ಕಲಶಕ್ಕೆ ಕುಂಕುಮ ನೀರು ಉವಾಳಿಸಿ ಸಿಂಗರಿಸುವುದು. ಪೂಜೆಯ ವೇಳೆಗೆ ಕರ್ಪೂರ ದಶಾಂಗ ಉಪಯೋಗಿಸಿ 5 ಆರತಿ ಬೆಳಗಿಸಬೇಕು. ವಿಸರ್ಜನೆಗೆ ಒಂದು ಆರತಿ, ನೈವೇದ್ಯಕ್ಕೆ ಸಕ್ಕರೆ ಪೂಜಾವಿಧಿ ಆದ ನಂತರ ಪುರೋಹಿತರ ಪತ್ನಿಗೆ ವ್ಹಂಟಿ (ಮಡಿಲು) ತುಂಬಿಸಿ ದಕ್ಷಿಣೆ ಕೊಟ್ಟು ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ನಂತರ ಪ್ರಸಾದ ರೂಪ ಭೋಜನ. ಪೂಜೆಯ ಮುಂಚೆ ಬ್ರಾಹ್ಮಣರಿಂದ 'ಸತ್ಯನಾರಾಯಣ ಕಥೆ' ಓದಿಸಿ ಭಕ್ತಿಯಿಂದ ಶ್ರವಣ ಮಾಡಬೇಕು.

**ಸಪಾತ :** ಅಂದರೆ 1¼ ಪಾವು ಸಪೂರ ಸಜ್ಜಿಗೆ ಅದಕ್ಕೆ 1¼ ಕುಡ್ತೆ ದನದ ತುಪ್ಪ ಹಾಕಿ ಪರಿಮಳ ಬರುವವರೆಗೆ ಹುರಿಯಬೇಕು. 1¼ ಕುಡ್ತೆ ಹಾಲು ಭರ್ತಿಗೆ ಬಿಸಿ ನೀರು (ಅದಕ್ಕೆ ಲೆಕ್ಕ ಇಲ್ಲ) ಹಾಕಬೇಕು. ಆಗ 5 ಅಥವಾ 7 ರಸಬಾಳೆ ಹಣ್ಣು ಅದಕ್ಕೆ ಹಾಕಬೇಕು. ಬೆಂದ ನಂತರ 1¼ ಪಾವು ಸಕ್ಕರೆ ಬೆರಸಿ ಗಟ್ಟಿ ಆಗುವವರೆಗೆ ಬಾಳ್ಸಾ. ವ್ರತ ಮಾಡುವವರು ತಲೆಸ್ನಾನ ಮಾಡಿ ಆಹಾರ ತೆಗೆದುಕೊಳ್ಳಬೇಕು. ಆದಿನ ಅಕ್ಕಿಯಿಂದ ಮಾಡಿದ ತಿಂಡಿ ತಿನ್ನಬಾರದು. ಆಪ್ತ ಮಿತ್ರರೊಡಗೂಡಿ ಕುಟುಂಬದವರೊಡನೆ ಬ್ರಾಹ್ಮಣ ಸಂತರ್ಪಣೆ ಮಾಡಿ ದಾನ, ದಕ್ಷಿಣೆ ಕೊಟ್ಟು, ಪುರೋಹಿತರನ್ನು ತೃಪ್ತಿ ಪಡಿಸುವುದು ಮುಖ್ಯ ಕರ್ತವ್ಯ. ಅವರು ತೃಪ್ತಿ ಪಟ್ಟರೆ ದೇವರು (ತೃಪ್ತಿ) ಸಂತೋಷ ಪಟ್ಟಂತಾಗುವುದು ಖಂಡಿತ.

# ಗರ್ಭಿಣಿ

ಒಲವಿನ ಮಗಳು ಚೊಚ್ಚಲು ಗರ್ಭಿಣಿಯಾದಾಗ 4ನೇ ತಿಂಗಳಲ್ಲಿ ತವರು ಮನೆಗೆ (ಕುಳ್ಳಾರಾ) ಕರೆ ತರುವುದು ಕ್ರಮ ಉಂಟು. ಆಗ್ಯೆ ಅವಳ ಆಕಾಂಕ್ಷೆಯ ತಿಂಡಿ - ತಿನಿಸುಗಳನ್ನು ಮಾಡಿ ತಾಯಿಯಾದವಳು ಅವಳನ್ನು ತೃಪ್ತಿ ಪಡಿಸಬೇಕು. ಆಗ ಉಷ್ಣದಕೀಲ್ರ್ (ಕಣಿಲೆ), ಗೇರುಬೀಜ, ಹಸಿ ಪಪ್ಪಾಯಿ, ಅನನಾಸು, ಎಳ್ಳು ಉಂಡೆ ಮುಂತಾದುವುಗಳನ್ನು ಕೊಡಲೇಬಾರದು. ಮಿತಿಮೀರಿ ಬಿಸಿ, ಖಾರ ಆಹಾರ ಕೊಡಬಾರದು. ಇಷ್ಟವಿದ್ದ ಹಣ್ಣು-ಹಂಪಲು, ಹಾಲು, ತುಪ್ಪ, ಬೆಣ್ಣೆ, ಮೊಸರು ಕೊಡಬೇಕು. ಒಳ್ಳೆ ವ್ಯಾಯಾಮವಿರುವ ಕೆಲಸ ಸಾಧ್ಯವಿದ್ದಷ್ಟು ಮಾಡುವುದು ಒಳ್ಳೆಯದು. ಹೆಚ್ಚು ಭಾರವಾದ ವಸ್ತುಗಳನ್ನು ಎತ್ತಬಾರದು. (ಮಲ ಮೂತ್ರದ ವಿಷಯದಲ್ಲಿ ಜಾಗ್ರತೆ ಮಾಡಬೇಕು). ಪ್ರತೀ ತಿಂಗಳಲ್ಲಿ ಚೆಕಪ್ ಮಾಡಿಸಿದರೆ ಒಳ್ಳೆಯದು. 6ನೇ ತಿಂಗಳಿನ ನಂತರ 1 ಚಮಚ ಎಳ್ಡೆಲ್ ತೈಲ (Castor Oil) ಮಲಗುವಾಗ ಪ್ರತೀ ದಿನ ಸೇವಿಸಬೇಕು. 8 ತಿಂಗಳಾದ ಮೇಲೆ ತನಗೆ ಸಾಧ್ಯವಾದಷ್ಟು ನಡೆಯಬೇಕು. ಮಲಬದ್ಧತೆ ಇದ್ದರೆ ಬೆಳಿಗ್ಗೆ ಗಂಜಿನೀರು (ನಿಶ್ಯೆ) 2ಕುಡ್ತೆಗೆ 2 ಚಮಚ ಬೆಣ್ಣೆ ಹಾಕಿ ಬಿಸಿ ಬಿಸಿ ಕುಡಿಸಬೇಕು.



**8ನೇ ತಿಂಗಳಲ್ಲಿ ಸೀಮಂತ ಇದ್ದರೆ :** ಮಾತಾಪಿತೃರು ಬರುವಾಗ ಹೂ, ಶೇಸೆ, ಮಿಠಾಯಿ ಬೀಗರಲ್ಲಿ ತರಬೇಕು. ಹವನ (ಹೋಮ) ಸಮಯದಲ್ಲಿ ಅಳಿಯನ ಕಾಲ್ತೊಳೆದು ಜನಿವಾರ ಹಾಕಿ ಇಬ್ಬರಿಗೂ ಉಡುಗೊರೆ ಮಾಡಬೇಕು. ಕಡೆಗೆ ಮಡಿಲು (ವ್ಹಂಟಿ) 7 ಬಾಳೆಹಣ್ಣು ಇಟ್ಟು ತುಂಬಿಸಿ ಶೇಸೆ ಆರತಿ ಮಾಡಿದನಂತರ ಪುರೋಹಿತ ಬಂಧು-ಬಳಗದವರೊಡಗೂಡಿ ಭೋಜನ (ಊಟ) ಮಾಡುವುದು. ಸಿಹಿ ಪಾಯಸ, ಅಕ್ಕಿ ವಡೆ ಮುಖ್ಯವಾಗಿ ಮಾಡಬೇಕು. ಸೀಮಂತ ಆದ ದಿನವೇ ತಾಯಿ ಮನೆಗೆ ಕರೆದು ತರಬಾರದು. ಸುಮಹೂರ್ತದಲ್ಲಿ ತಂದೆ-ತಾಯಿ ಅಥವಾ ಇತರರು ಕರೆದು ತರಬಹುದು. ಆದರೆ ಗರ್ಭಿಣಿಯ ಅಣ್ಣ ಅಥವಾ ತಮ್ಮ ಕರೆದು ತರಲೇಬಾರದು. (ನಿಷೇಧ) ಗರ್ಭಿಣಿಯು ತನ್ನ ಪತಿಯಿಂದ ಮಾವ ಅತ್ತೆಯವರಿಂದ, ಹಿರಿಯರಿಂದ ಆಶೀರ್ವಾದ ಪಡೆದು ಸಂತೋಷದಿಂದ ತಾಯಿ ಮನೆಗೆ ಬರಬೇಕು. ಯಾವ ವಿಷಯದಲ್ಲಿಯೂ ಚಿಂತೆ ಮಾಡಬಾರದು. 8 ತಿಂಗಳಾಗಿ 4 ದಿನಗಳ ನಂತರ ತಾಯಿ ಮನೆಯ ಸೀರೆ "ಗರ್ಭಿಣಿ ಕಾಪ್ಪಡ" ಎಂಬ ವಿಧಾನವನ್ನು ಮಗಳ ಆಪ್ತ ಗೆಳತಿಯರಿಗೂ ಹೇಳಿ ಸಾಧ್ಯವಿದ್ದ 4 ಅಥವಾ 5 ಬಗೆಯ ತಿಂಡಿ (ಮುಖ್ಯ ಸಿಹಿ ಅವಲಕ್ಕಿ ಮಾಡಬೇಕು) ಫಲಾಹಾರದ ನಂತರ, ಬಂದವರಿಗೆ ಹೂ ಕುಂಕುಮ ಹಚ್ಚಿ ಶೇಸಾರತಿ ಮಾಡುವಲ್ಲಿ ಕುಳ್ಳಿರಿಸಿ "ಸುಮಹೂರ್ತದಲ್ಲಿ" ದೆಡ್ಡಿ ಸಮೇತ ಗರ್ಭಿಣಿಯನ್ನು ಆಸನದಲ್ಲಿ ಕುಳ್ಳಿರಿಸಿ ಮೊದಲು ತಾಯಿ ಬೈತಲೆಗೆ (ಮಾಗೊ) ಕುಂಕುಮವಿಟ್ಟು ಬೊಟ್ಟು ಮಾಡಿ, ಹೂ ಕೊಟ್ಟು ಮಡಿಲು ತುಂಬಿಸುವುದು. ತೆಂಗಿನಕಾಯಿ-1, (ಅದರ ಶೆಂಡೊ ನಮ್ಮ ಎದುರಿಗೆ ಬರಬೇಕು) 7 ಬಾಳೆಹಣ್ಣು, ವೀಡೊ, ಉಡುಗೊರೆಗೆ

ಚಿನ್ನ, ಸೀರೆ, ಹಣ ಇಷ್ಟವಿದ್ದಷ್ಟು ಕೊಟ್ಟು, ಶೇಸೆ ಹಾಕಿ ಇತರರಿಂದ ಶೇಸೆ ಹಾಕಿಸಿ ಮತ್ತೆ ಎಲ್ಲರೂ ಆರತಿ ಬೆಳಗಿಸುವುದು. ನಂತರ ಶೇಸಾರತಿ ತೆಗೆದುಕೊಂಡು ದೇವರ ಕೋಣೆಯಲ್ಲಿ ಇಟ್ಟು, ಗರ್ಭಿಣಿ, ದೇವರಿಗೆ ನಮಸ್ಕರಿಸಿ, ಹಿರಿಯರ ಕಾಲುಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆಯುವುದು. ಉಡುಗೊರೆ ಕೊಟ್ಟ ಸೀರೆ ಉಟ್ಟು ಗ್ರಾಮ ದೇವಸ್ಥಾನದಲ್ಲಿ ಹಣ್ಣುಕಾಯಿ ಮಾಡಿಬರುವುದು. ಗರ್ಭಿಣಿ 'ಸೋಣಫೂಲ' ಮಾಡಿಸುವ ಇಚ್ಛೆ ಇದ್ದರೆ ಮಾಡಿಸಬಹುದು. ದೇವಸ್ಥಾನದಿಂದ ಬಂದು ಮನೆಯ ಅಂಗಳದಲ್ಲಿ ನಿಲ್ಲಿಸಿ ಒಂದು ತೆಂಗಿನಕಾಯಿಯನ್ನು ಗರ್ಭಿಣಿಯ ತಲೆಯ ಮೇಲಿನಿಂದ ಮೂರು ಸಾರಿ ನಿವಾಳಿಸಿ (ಉವಾಳ್ನು) ನೆಲಕ್ಕೆ ಬಡಿಯಬೇಕು. ಕುಂಕುಮ ನೀರನ್ನು ನಿವಾಳಿಸಿ ನೀರನ್ನು ಬಿಸಾಡಬೇಕು. ಗರ್ಭಿಣಿಗೆ ಆಸೆ ಇದ್ದ ತಿಂಡಿ ತಿನಿಸುಗಳನ್ನು, ಪದಾರ್ಥಗಳನ್ನು ಮಾಡಿ ತಿನ್ನಿಸುವುದು. ಗರ್ಭಿಣಿಗೆ ಆಪ್ತ ಬಂಧುಗಳಲ್ಲಿ ಊಟಕ್ಕೆ ಹೇಳುವುದುಂಟು.

## ಪ್ರಸೂತ

ಪರಮಾತ್ಮನು ನೆನೆಸಿದ ಮುಹೂರ್ತದಲ್ಲಿ ಸುಖ ಪ್ರಸೂತವಾದೊಡನೆ (ಹಿಂದಿನ ಕಾಲದಲ್ಲಿ ಮನೆಯಲ್ಲಿ ಈಗ ಆಸ್ಪತ್ರೆಯಲ್ಲಿ) ಗಂಡು ಮಗುವಾದರೆ 'ಪುತ್ರಾಯಣ' ಎಂಬ ಶಾಸ್ತ್ರ ವಿಧಾನವನ್ನು ಪುರೋಹಿತರಿಂದ ಮಾಡಿಸುತ್ತಾರೆ. ಮಗುವಿನ ಹೊಕ್ಕಳು (ವಾರ) ಕಡಿದ ಕೂಡಲೇ ಹೊರಗೆ ತಂದು ತಂದೆ ಕೈಯಿಂದ ಪುತ್ತಳಿ ಬಂಗಾರವನ್ನು ಸ್ವಲ್ಪ ಅರೆದು ಮಗುವಿನ ಬಾಯಿಗೆ (ನಾಲಿಗೆಗೆ) ಹಚ್ಚುವುದುಂಟು. ನಂತರ ಮಗುವನ್ನು ಸ್ನಾನಮಾಡಿಸಿ ಬೆಚ್ಚಗೆ ಹೊದೆದು ಮಲಗಿಸಬೇಕು.

ಪುತ್ರೋತ್ಸವದ ಸಂತೋಷದಲ್ಲಿ ಬಂಧುಗಳಲ್ಲಿಯೂ, ಆಪ್ತರಲ್ಲಿಯೂ ಸಕ್ಕರೆ ಅಥವಾ ಮಿಠಾಯಿ ಹಂಚುವುದು.

### ಮಗುವಿನ ಹುಟ್ಟಿದ 6 ದಿನ "ಸಟ್ಟಿ"

ಸಟ್ಟಿ ಎಂಬ (ಬ್ರಹ್ಮ ಬರಹ) ಎಂಬ ಶಾಸ್ತ್ರ ವಿಧಿಯನ್ನು ಮಾಡಬೇಕು. ಬಾಳಂತಿ ಮಗು ಇದ್ದ ಕೋಣೆಯಲ್ಲಿ ಒಂದು ಮಣೆಯನ್ನು ತೊಳೆದು ರಂಗವಲ್ಲಿ ಹಾಕಿ, ಅದರ ಮೇಲೆ ಖಾಲಿ ಪುಸ್ತಕ, ಪೆನ್ಸಿಲು ಇಡಬೇಕು. ಹೂವಿನಿಂದ ಮಣೆಯನ್ನು ಅಲಂಕರಿಸಬೇಕು. ಈ ಶಾಸ್ತ್ರವಿಧಿಗೆ ಪುರೋಹಿತರ ಅಗತ್ಯ ಉಂಟು. (ಅಲಂಕಾರಯುಕ್ತ ಕಾಲುದೀಪ ಉರಿಸಬೇಕು.) ಕುಂಕುಮ, ಹಾಲು, ನೀರು, ಸಕ್ಕರೆ, ಸಣ್ಣ ಪಾತ್ರೆಗಳಲ್ಲಿ ಇಡಬೇಕು. ಮಗುವನ್ನು ಒಳ್ಳೆ ವಸ್ತ್ರ ಹೊದೆದು ಮಲಗಿಸಬೇಕು. "ಅವಲಕ್ಕಿ ಕಜ್ಜಾಯ" ಮಾಡಿ ದೇವರನ್ನು ಸ್ಮರಿಸಿ ಭಜನೆ ಮಾಡಬೇಕು. (ಮನೆಯಲ್ಲಿಯಾದರೆ ಹರಿಕೀರ್ತನೆ, ಹರಿಕಥೆ ಮಾಡಿಸುತ್ತಾರೆ). ಈ ಸಮಾರಂಭಕ್ಕೆ ಇಷ್ಟ ಆಪ್ತರಿಗೆ ಹೇಳಿ ಭಜನೆಯಾದ ನಂತರ ಮುಗಾದಾಳಿ ಉಸ್ಲಿ, ಚಣ್ಯಾ ಉಪ್ಕರಿ, ಗೋದು ಪೋವ್ಲು, ಕೇಳೆ, 'ಶರಬತ್' ಅಥವಾ ಶುಂಠಿ ಪಾನಕ ಮಾಡಿ ಹಂಚುತ್ತಾರೆ. ಮರುದಿನ ಕಡ್ಡಾಯವಾಗಿ ಮಗುವಿಗೆ ಸ್ನಾನ ಮಾಡಿಸಬಾರದು. ಅದಕ್ಕೆ 'ಸಟ್ಟೆ

ಕಲಶು' ಎನ್ನುತ್ತೇವೆ. (ಬ್ರಹ್ಮಲಿಪಿ ಅಳಿದು ಹೋಗುತ್ತದೆಂದು ನಮ್ಮ ಹಿರಿಯರ ಅಭಿಪ್ರಾಯ).

## ವಾರೆ ಪೂಜಾ

**ದಾರಗಳು ಮತ್ತು ಪೂಜೆಯ ರೀತಿ :** 10ನೇ ದಿನ ಮಧ್ಯಾಹ್ನ 1 ಇಂಚಿನಷ್ಟು 'ಎಂಕ್ನಾ' ತುಂಡು ಬಿಸಿ ನೀರಿನಲ್ಲಿ ಹಾಕಿಡಬೇಕು. ಅದು ಮೆತ್ತನೆಯಾದನಂತರ ಚಿಕ್ಕ ಚಿಕ್ಕ ಸಪೂರ ಕಡ್ಡಿಗಳಂತೆ ಮಾಡಿ ಇಡಬೇಕು. ಒಂದು ಮೊಳೆ ನೂಲಿನ ತುಂಡಿಗೆ ಈ ಕಡ್ಡಿಗಳನ್ನು ಕಟ್ಟಿ 11 ದಾರಗಳನ್ನು ಮಾಡಬೇಕು. ತಾಯಿ ಮಗುವಿನ ದಾರಗಳನ್ನು 'ಕೊಕ್ಕೆಮೊಳೊ'ವಿನಿಂದ ಚಂದ ಸರಪಳಿ ಹಾಗೆ ಮಾಡಿ ಅದರ ನಡುವಿನಲ್ಲಿ ಈ ಕಡ್ಡಿ ಕಟ್ಟಬೇಕು. ಈ ಮೂರೂ ದಾರಗಳನ್ನು 5 ವೀಳ್ಯದೆಲೆಯಲ್ಲಿ ಇಟ್ಟು, 1 ಅಡಿಕೆ ಇಡಬೇಕು. ಬಾಕಿ ದಾರಗಳನ್ನು ಎರಡು ಎಲೆ ಒಂದು ನೂಲಿನದಾರ, ಒಂದು ತುಂಡು ಅಡಿಕೆ, ಹೂ, ತುಂಡು ಸೇವಂತಿಗೆ ಇಟ್ಟು ಶೀಗಿರ ಕಡ್ಡಿಯಿಂದ ಮುಚ್ಚಬೇಕು. ಮರುದಿನ ಬೆಳಿಗ್ಗೆ ಬಾಳಾಂತಿ ಸ್ನಾನದ ನಂತರ ಒಂದು ಹರಿವಾಣದಲ್ಲಿ ಕುಂಕುಮ ಪಾತ್ರೆ, ಕಾಡಿಗೆ (ಕಾಜ್ಜಳ) ಹೂ ತುಂಡುಗಳು, ಅಕ್ಷತೆ ಎಲ್ಲಾ ದಾರಗಳು, ವೀಡೋ ಇಡಬೇಕು. ಒಂದು ಮುಷ್ಠಿ ಬಿಳ್ತಿಗೆ ಅಕ್ಕಿ ಬೇಯಿಸಿ ಸಕ್ಕರೆ, ಹಾಲು ಹಾಕಿ ಸಣ್ಣ ಪಾತ್ರೆಯಲ್ಲಿ ಸೌಟು ಸಮೇತ ಇಡಬೇಕು. ಪೂಜೆ ಮಾಡುವ ಸ್ಥಳದಲ್ಲಿ ಸಣ್ಣ ಕಾಲುದೀಪ ಬೆಳಗಿಸಿಡಬೇಕು. ಆರತಿ-1, ಮಳೆಗಾಲದಲ್ಲಿಯಾದರೆ ಬಾಳಾಂತಿ ಮಣೆಯ ಮೇಲೆ ನಿಂತು ಪೂಜೆ ಮಾಡಬಹುದು. ಸ್ನಾನವಾದ 1 ಗಂಟೆಯ ನಂತರ ಪೂಜೆ ಮಾಡಬೇಕು.

**ಬಾಳಾಂತಿ ಸ್ನಾನ :** ಹತ್ತನೇ ದಿನ ರಾತ್ರಿ ಹಂಡೆಯಲ್ಲಿ ನೀರು ಕಾಯಿಸಿಡಬೇಕು. ಬೆಳಿಗ್ಗೆ ಮೊದಲು ಮಗುವನ್ನು ಉಗುರು ಬೆಪ್ಪು ನೀರಿನಿಂದ ಸ್ನಾನಮಾಡಿಸಬೇಕು. ಮೈಗೆ ದನದ ಹಾಲು ಬಿಸಿ ಮಾಡಿ ತಾಗಿಸಬೇಕು. ಇಲ್ಲವೇ ಪರಂಗಿ (ಪಂಗಿರ ಪಾನ) ಪಾಲ್ಯಾರಸ ತೆಗೆದು ಬಿಸಿ ಮಾಡಿ ತಣಿಸಿ ತಾಗಿಸಬೇಕು. ಇದರಿಂದ ಮಗುವಿಗೆ ಶೀತವಾಗುವುದಿಲ್ಲ. ಮಗುವಿನ ಸ್ನಾನದ ನಂತರ ತಾಯಿಗೆ ಸ್ವಲ್ಪ ಎಣ್ಣೆ ಹಚ್ಚಿ ಆದಷ್ಟು ಬೇಗ (ಹೆಚ್ಚು ಬಿಸಿ ಅಲ್ಲ) ಕೈಕಾಲು ತೊಳೆದು ಸ್ನಾನಮಾಡಬೇಕು. ತಲೆಯನ್ನು ಬೆಪ್ಪು ನೀರಿನಿಂದ ತೊಳೆದು ಸೊಂಟಕ್ಕೆ, ಕಾಲಿಗೆ ಬಿಸಿ ನೀರು ಹಾಕಬೇಕು. ಬಾಳಾಂತಿಗೆ ಅರಸಿನಹುಡಿ ಮೈಗೆ ತಾಗಿಸಿ ಸ್ನಾನ ಮಾಡಿಸಿ ಬಚ್ಚಲು ಮನೆಯಲ್ಲಿಯೇ ನಿಂತು ಕುಂಕುಮದ ಬೊಟ್ಟು ಮಾಡಿಸಿ ಒಳಗೆ ಬರಬೇಕು. ಹೆಣ್ಣಿಗೆ ತನ್ನ ಮದುವೆ ದಿನ ಮತ್ತು ಬಾಳಾಂತಿಯಾದ 11ನೇ ದಿನ ಬೊಟ್ಟು ಮಾಡದೆ ಬಚ್ಚಲು ಮನೆಯಿಂದ ಹೊರಗೆ ತರಬಾರದು. ಒಳಗೆ ಬರುವಾಗ ದಪ್ಪ ಬಟ್ಟೆಯಿಂದ ಹೊದೆದು ಬೆವರು ಒರಸಿ ನಂತರ ಬಿಳಿ ಸೀರೆ ಬಿಳಿ ರವಕೆ ಉಟ್ಟು, ವಾರಪೂಜೆ ಮಾಡಬೇಕು (ಹೊಕ್ಕಳು ಪೂಜೆ).

**ಹೊಕ್ಕಳು ಪೂಜೆಮಾಡುವ ವಿಧಾನ :** ಆಸ್ಪತ್ರೆಯಿಂದ ಬರುವಾಗ ಹೊಕ್ಕಳು ಬಳ್ಳಿ (ವಾರೇದೆಂಟು) ಜಾಗ್ರತೆಯಿಂದ ಮನೆಗೆ ತರಬೇಕು. ಈ ದಂಟು ಹೆಚ್ಚುದಿನದಲ್ಲಿ ಬಿದ್ದರೆ ಗಟ್ಟಿಮುಟ್ಟಾದ ಮಗು ಎಂದು ಅರ್ಥ. ಹೊಕ್ಕಳು ಬಿದ್ದ ದಿನ ಅದನ್ನು ಅಂಗಳದ ಬದಿಯಲ್ಲಿ ಹೂತಿಟ್ಟು ಅದರ ಮೇಲೆ ಅಗಲ ಕಲ್ಲು ಇಡಬೇಕು. ನೀರಿನ ಚಂಬು ಮತ್ತು ದೀಪವನ್ನು ತಂದು ಸ್ವಲ್ಪ ಸಿಹಿ ಪಾಯಸವನ್ನು ಕಲ್ಲಿನ ಮೇಲೆ ಸಣ್ಣ ಬಾಳೆ ಎಲೆ (ತುದಿದ್ದು)ಯಲ್ಲಿ 5 ಸಾರಿ ಬಡಿಸಬೇಕು. ಕಲ್ಲಿಗೆ ಕುಂಕುಮ, ಹೂ, ವೀಳ್ಯಪಟ್ಟಿ-1 ಇಟ್ಟು ದೇವರನ್ನೂ,

ಸೂರ್ಯದೇವರನ್ನೂ ಪ್ರಾರ್ಥಿಸಿ ತನ್ನ ಹೊಟ್ಟೆಯನ್ನು ತಂಪು ಮಾಡು ಅಂದರೆ ತನ್ನ ಪ್ರೀತಿಯ ಮಗುವನ್ನು ಆರೋಗ್ಯ ಆಯುಷ್ಯ ಕೊಟ್ಟು ಕಾಪಾಡೆಂದು ಪ್ರಾರ್ಥನೆ. ಆರತಿ ಮಾಡಿ ಅಕ್ಷತೆ ಹಾಕಿ ಒಳಗೆ ಬರುವುದು. ಹರಿವಾಣದಲ್ಲಿದ್ದ 5 ವೀಳ್ಯ, 1 ಅಡಿಕೆ ಅಲ್ಲಿಯೇ ಕಲ್ಲಿನ ಮೇಲೆ ಬಿಡಬೇಕು. (ಕೆಲಸದವಳಿಗೆ ಮತ್ತೆ ಕೊಡಬಹುದು). ಒಳಗೆ ಬಂದು ಪುರೋಹಿತರಿಂದ ಪಂಚಗವ್ಯ ತೀರ್ಥ ತೆಗೆದುಕೊಂಡು ತನ್ನ ದಾರವನ್ನು ಕುತ್ತಿಗೆಯಲ್ಲಿ ಧರಿಸಿ ಮೊದಲು ತನ್ನ ತಾಯಿಗೆ ಕೊಟ್ಟು ನಮಸ್ಕರಿಸಬೇಕು. ನಂತರ ಅತ್ತೆ, ನಾದಿನಿ, ಅತ್ತಿಗೆ, ಅಕ್ಕ ತಂಗಿಯರಿಗೆ ವಿಡೊ ಕೊಡಬೇಕು. ಮಗು ನಿದ್ದೆಯಿಂದ ಎಚ್ಚೆತ್ತ ಮೇಲೆ ಸೊಂಟಕ್ಕೂ, ಕುತ್ತಿಗೆಗೂ ದಾರವನ್ನು ಸಡಿಲವಾಗಿ ಕಟ್ಟಬೇಕು. ಸಣ್ಣ ಮಕ್ಕಳ ಕೈಗೆ ಒಂದು ದಿನದ ತನಕ ಕಟ್ಟಬಹುದು. ನಂತರ ಬಾಳಾಂತಿ ಗಂಜಿ ಊಟ ಮಾಡಬೇಕು. ಆಗ ಪ್ರಸಾದದ ಪಾಯಸ ಸೇವಿಸಬೇಕು. ಒಂದು ತಿಂಗಳು ಸಂಪೂರ್ಣ (ರೆಸ್ಟ್) ಆರಾಮ ತೆಗೆದು ಕೊಳ್ಳುವುದು ಅಗತ್ಯ.

**ಪುಣ್ಯಾವಾಚನ :** 11ನೇ ದಿನ ಬಾಳಾಂತಿ ಕುಟುಂಬಕ್ಕೆ ಶುದ್ಧ. ಸೂತಕ ಶುದ್ಧವಾಗುತ್ತದೆ. ಬ್ರಾಹ್ಮಣರನ್ನು ಕರೆದು ಮನೆಯನ್ನು ಸಂಪ್ರೋಕ್ಷಣೆ ಜಲದಿಂದ ಶುದ್ಧ ಮಾಡಿ ಬಾಳಾಂತಿಗೆ ಪಂಚಗವ್ಯ ತೀರ್ಥವನ್ನು ಸ್ನಾನದ ನಂತರ ಕೊಡಬೇಕು. ಇದಕ್ಕೆ 'ಪುಣ್ಯಾವಾಚನ ಎನ್ನುತ್ತೇವೆ. ಇದಕ್ಕೆ 1 ಸೇರು ಬೆಳ್ತಿಗೆ ಅಕ್ಕಿ, 2 ತೆಂಗಿನಕಾಯಿ, ವೀಳ್ಯದ ಪಟ್ಟೆ, ಕಲಶಕ್ಕೆ ಚಂಬು-1, ಮಣೆ ಕಾಲುದೀಪ, ತಟ್ಟೆ, ಚಿಪ್ಪುಟ, ಹೂ, ತೀರ್ಥಕ್ಕೆ ತಟ್ಟೆ ಹರಿವಾಣ, ಮಾವಿನ ಕೊಡಿ.

**ಬಾಳಾಂತಿ ಆರೈಕೆ :** ಒಂದು ತಿಂಗಳು ಪೂರ್ಣ ಆರಾಮ ತೆಗೆದುಕೊಳ್ಳಬೇಕು. ಊಟ, ಕಾಫಿಗೆ ಮಾತ್ರ ಏಳಬೇಕು. 13ನೇ ದಿನದಿಂದ ಬೆಳಿಗ್ಗೆ ಎದ್ದ ಕೂಡಲೇ ½ ಔನ್ಸ್ 'ದಶಮೂಲಾರಿಷ್ಟ' ಸ್ವಲ್ಪ ನೀರಿನೊಂದಿಗೆ ಕುಡಿಯಬೇಕು. ½ ಗಂಟೆ ನಂತರ ಒಳ್ಳೆ ಬೆಂದ ಗಂಜಿ, ತುಪ್ಪ, ಬಿಸಿ ಬಿಸಿ ಉಪ್ಕರಿ ಪಲ್ಯ ಮಾಡಿ ಉಣ್ಣುವುದು ಬಹಳ ಉತ್ತಮ. ಇದರಿಂದ ತಾಯಿಗೆ ಬೇಗ ಶಕ್ತಿಯೂ, ಮಗುವಿಗೆ 'ಎದೆ ಹಾಲು' ಸಿಕ್ಕುತ್ತದೆ. ಬಾಳಾಂತಿಗೆ ಎರಡು ದಿವಸಕ್ಕೊಮ್ಮೆ ತಲೆ ಸ್ನಾನಕ್ಕೆ ಎಣ್ಣೆ ಮೈಗೆ ಹಚ್ಚಿ ಸ್ನಾನ ಮಾಡುವುದು. ಕೆಂಪು ನೀರು (ತಾಂಬ್ರೆ ಪಾಳ) ಅಶ್ವಗಂಧಿ ತುಂಡನ್ನು ಜಜ್ಜಿ ಎಣ್ಣೆ ಬಿಸಿ ಮಾಡಿ ಅದರಲ್ಲಿ ಹಾಕಿ ಈ ಮದ್ದಿನ ಎಣ್ಣೆಯನ್ನು ಮಗುವಿಗೆ ತಾಗಿಸಬೇಕು. ತಾಯಿಗೆ 'ಕಡ್ಯಾತೇಲ' ತಾಗಿಸಬೇಕು. ತಾಯಿಯು 2 ತಿಂಗಳವರೆಗೆ ಎಲ್ಲೂ ಹೊರಗೆ ಹೋಗಬಾರದು. 2 ತಿಂಗಳಿಗೆ 4 ದಿನ ಅಥವಾ 1 ವಾರ ಕಮ್ಮಿ ಇದ್ದಾಗ ಒಳ್ಳೆ ದಿನ ನೋಡಿ ಬಾವಿ ಮುಟ್ಟುವುದು. 14ನೇ ದಿನದಿಂದ ಬಾಳಾಂತಿಗೆ 1 ತಿಂಗಳ ತನಕ 'ಏರ್ಶೆ' ಕೊಡಬೇಕು. ಬಾವಿಗೆ ಮುಟ್ಟಿದ ದಿನದಿಂದ ಕೆಲಸಕ್ಕೆ ಪ್ರಾರಂಭ. ಆದಿನ ತಲೆಸ್ನಾನದ ಮೊದಲು 2 ತಿಂಗಳ ಸೂತಕ ದಾರವನ್ನು, ಮಗುವಿನ ಸೊಂಟ, ಕುತ್ತಿಗೆಯ ದಾರವನ್ನೂ ತೆಗೆದು ಒಟ್ಟಿಗೆ ಒಂದು ವೀಳ್ಯದ ಪಟ್ಟೆಯಲ್ಲಿ ಇಡಬೇಕು. ಆದಿನ ಸ್ನಾನಕ್ಕೆ ಅರಸಿನ ಹುಡಿ ಉಪಯೋಗಿಸಬೇಕು. ಸ್ನಾನದ ನಂತರ ನಿತ್ಯದ ಬಂಗಾರ, ಕಿವಿಯ ಬೆಂಡೋಲೆ ಹಾಕಬೇಕು. ಹರಿವಾಣದಲ್ಲಿ ಕುಂಕುಮ, ಗಂಧ, ಅಕ್ಷತೆ, ನೈವೇದ್ಯಕ್ಕೆ ಸಕ್ಕರೆ, ಬಾಳೆಹಣ್ಣು-2, ಆರತಿ-1, ಬಾವಿಯ ಹತ್ತಿರ ಅಥವಾ ಪೈಪಿನ ಹತ್ತಿರ ಬಾವಿದಂಡೆಗೆ ಹೂ, ಗಂಧ, ಕುಂಕುಮ ಹಚ್ಚಿ ವೀಳ್ಯದ ಪಟ್ಟೆ, ಕುಂಕುಮ ಬಾವಿಯಲ್ಲಿ ಹಾಕಿ ಆರತಿ ಬೆಳಗಿಸಿ, ಗಂಗೆ ಪೂಜೆ ಮಾಡುವುದು. ಈ ಪೂಜೆ ತನ್ನ ತಾಯಿ ಅಥವಾ ಹಿರಿಯರ ಒಟ್ಟಿಗೆ

ಮಾಡಿ ಸಣ್ಣ ಚಂಬಿನಲ್ಲಿ ನೀರು ತಂದು ತುಳಸಿಕಟ್ಟೆ 'ವೃಂದಾಮಾತೆ'ಗೆ ನೀರನ್ನು 5 ಸಾರಿ ಹಾಕಿ ತಲೆಯಮೇಲೆ ಪ್ರೋಕ್ಷಿಸಿ (ಸಿಂಪಡಿಸಿ) ಕುಂಕುಮ ಇಟ್ಟು ಹೂ ತುಂಡನ್ನು ತುಳಸಿ ಗಿಡದ ಗೆಲ್ಲಿನಲ್ಲಿಟ್ಟು ಐದು ಪ್ರದಕ್ಷಿಣೆ ಬಂದು ಸೂರ್ಯದೇವರಿಗೆ ನಮಸ್ಕಾರ ಮಾಡಿ ವೃಂದಾ ಮಾತೆಯನ್ನು ಭಕ್ತಿಯಿಂದ ಪೂಜಿಸಿ ಕಲ್ಪವೃಕ್ಷ ತೆಂಗಿನಮರಕ್ಕೆ ಸಹಾ 5 ಸಾರಿ ನೀರು ಹಾಕಿ ಕುಂಕುಮ ಇಟ್ಟು ತನ್ನ ಮೂರೂದಾರಗಳನ್ನು, ವೀಳ್ಯವನ್ನು ತೆಂಗಿನ ಪೊಟರೆಯಲ್ಲಿಟ್ಟು 1 ಸುತ್ತು ಪ್ರದಕ್ಷಿಣೆ ಹಾಕಿ ಮನೆದೇವರನ್ನು ಭಕ್ತಿಯಿಂದ ನಮಸ್ಕರಿಸಿ ತಾಯಿ ಮತ್ತು ಹಿರಿಯರಿಗೆ ಕುಂಕುಮ ಕೊಟ್ಟು ಗಂಜಿ ಊಟ ಮಾಡಬೇಕು. ಇಷ್ಟೆಲ್ಲಾ 11 ಗಂಟೆಯೊಳಗೆ ಆಗಬೇಕು. ಸಂಜೆ ತಾಯಿ ಮತ್ತು ಇತರರೊಂದಿಗೆ ಗ್ರಾಮ ದೇವಸ್ಥಾನಕ್ಕೆ ಮಗುವಿನೊಡನೆ ಹೋಗಿ ಹಣ್ಣುಕಾಯಿ ಮಾಡಿಬರುವುದು. ಮನೆಯ ಹತ್ತಿರ ಅಂಗಳದಲ್ಲಿ ತಾಯಿ ಮಗುವನ್ನು ನಿಲ್ಲಿಸಿ ಕುಂಕುಮ ನೀರನ್ನು ಉವಾಳಿಸಿ ಬಿಸಾಡಬೇಕು.

ಮೂರನೇ ತಿಂಗಳಲ್ಲಿ ಕೈಕಾಲು ತೊಳೆಯಲಿಕ್ಕಿಲ್ಲ. ವಾರಕ್ಕೆ 3 ಸ್ನಾನ, ಆದಿತ್ಯವಾರ, ಬುಧವಾರ 2 ಬಾಟ್ಲಿ ದಶಮೂಲಾರಿಷ್ಟ ಕೊಟ್ಟ ನಂತರ ಬೇರೆ ಟೋನಿಕ್ ಹೆಮೊದ್ರಾಕ್ಷಾಮೊಳ್ಟ್ ಕೊಟ್ಟರೆ ಸಾಕು. 4 ತಿಂಗಳ ನಂತರ ಹಣ್ಣು ಹಂಪಲು, ತರಕಾರಿ, ಮೀನು ತಿನ್ನಬೇಕು. ಹೆಚ್ಚು ಖಾರ ತಿನ್ನಬಾರದು. 4 ತಿಂಗಳ ನಂತರ ಪತಿ, ಅತ್ತೆ ಕರೆಯಲು ಬಂದಾಗ ಸಂತೋಷದಿಂದ ಹೊರಡುವುದು. ಹಿರಿಯರು ತೊಟ್ಟಿಲ ಮಗುವನ್ನು ಕರೆಯಲು ಬಂದಾಗ ಅವರಿಗೆ ಮೃಷ್ಟಾನ್ನ ಭೋಜನ ಮಾಡಿ ನಂತರ ಉಡುಗೊರೆಯಾಗಿ ಸೀರೆ ಅಥವಾ ರೂ. ಕೊಡಬಹುದು. ಅತ್ತೆಯ ಒಟ್ಟಿಗೆ ಸೊಸೆಯ ಮಡಿಲು ತುಂಬಿಸಬೇಕು. ಉಡುಗೊರೆ ಅಗತ್ಯ ಇಲ್ಲ. ಅತ್ತೆ ಮನೆಯಲ್ಲಿ ತಾಯಿ ಮಗುವಿಗೆ ಕುಂಕುಮ ನೀರು ನೀವಾಳಿಸಿ ಒಳಗೆ ತರುವುದು.

**ಬಾಳಾಂತಿ ಮಗುವಿಗೆ ತಾಯಿ ಮನೆಯಿಂದ ಕೊಡುವ ಕ್ರಮ :** ಮಗುವಿಗೆ ಸರಪಳಿ ಕೈಗೆ ಬಳೆ (ಗೋಲ), ಸೊಂಟಕ್ಕೆ ದಾಬಿ, ಉಡಿದಾರು (ಗೋಪು), ಕಾಲಿಗೆ ಗೆಜ್ಜೆ ತೊಟ್ಟಿಲು, ಹಾಸಿಗೆ, ಸಣ್ಣ ತಲೆದಿಂಬು, ಸಾಧ್ಯವಿದ್ದಷ್ಟು ವಸ್ತ್ರ, ಬೈರಾಸು, ಅಂಗಿ ಇತ್ಯಾದಿ ಬೊಳ್ಳಾ ಉರ್ವಳಿ, ಚಮಚ, ಸ್ನಾನಕ್ಕೆ ಕಠಾರ (ತೋಪು), ಸಣ್ಣ ತಪಲೆ ಹಾಲು ಕುಡಿಸಲು ಸಣ್ಣ ಗ್ಲಾಸು ಮಿಳ್ಳಿ. ಮಗಳೊಡನೆ ತಾಯಿ ಅಗತ್ಯವಾಗಿ ಹೋಗಬೇಕು. ಎರಡು ದಿನ ಇದ್ದು ಆದರ ಸತ್ಕಾರದ ಊಟದೊಡನೆ ಪ್ರತಿಯಾಗಿ ಉಡ್ಗೊರೆ ತೆಗೆದುಕೊಂಡು ಮನೆಗೆ ಮರಳುವುದು. ನಂತರ ಕೆಲವು ತಿಂಗಳ ನಂತರ ಪುನಃ ತಾಯಿ ಮನೆಗೆ ಕರೆದು ತರುವುದು. ಇದಕ್ಕೆ 'ಘಾಟಿಪರ್ತನೆ' ಎನ್ನುತ್ತೇವೆ. ಅಜ್ಜಿ ಮನೆಯವರ ಗುರುತು ಮರೆಯದಂತೆಯೂ, ಪ್ರೀತಿ ವಿಶ್ವಾಸ ಹೆಚ್ಚಲು ಒಂದು ಸಾಧನೆಯಾಗುತ್ತದೆ. ಒಂದನೇ ವರ್ಷದ ಹುಟ್ಟಿದ ಹಬ್ಬಕ್ಕೆ (Birthday) ಹೋಗಿ ನಾಲ್ಕು ದಿನ ಇದ್ದು ಬರುವುದು. ಹೋಗುವಾಗ ಹೂ, ಮಿಠಾಯಿ ಮಗುವಿಗೆ ಉಡುಗೊರೆ ಕೊಟ್ಟು ಮಗುವಿನ ಬಾಲಲೀಲೆ ನೋಡಿ ಸಂತೋಷಪಟ್ಟು ದೇವರು ಅನುಗಾಲವೂ ಹೀಗೆ ಸುಖ ಶಾಂತಿ ಸಂತೋಷ ಸಮಾಧಾನ ಕೊಡಲೆಂದು ದೇವರ ಹತ್ತಿರ ಪ್ರಾರ್ಥಿಸುವುದು.

## ಮಗುವಿನ ಬಾರ್ಸೋ ತೊಟ್ಟಿಲ ಹಾಕುವುದು.



**ಹವನದ ತಯಾರಿ :** ಕಾಲುದೀಪ ಅಲಂಕರಿಸಬೇಕು. ಹೋಮಕ್ಕೆ ಹಂಚು-2, ಸ್ವಲ್ಪ ಹೊಯ್ಗೆ, ಮಾವಿನ ಎಲೆ ಕೊಡಿ, ಬೆಳ್ತಿಗೆ ಅಕ್ಕಿ, ತೆಂಗಿನಕಾಯಿ, ಬಾಳೆಎಲೆ, ಚೌರು-½ ಸೇರಿನ ಬೆಳ್ತಿಗೆ ಅನ್ನ, ತಟ್ಟೆ ಚಿಪ್ಪುಟಿ. ಪುರೋಹಿತರಿಗೆ ಹರಿವಾಣ, ಹೂ ತುಂಡು, ನವಧಾನ್ಯ, ದನದ ತುಪ್ಪ, ಚಂಬು-2, ಮಣೆಗಳು-3.

**ಚೀನಿವಾರನಿಗೆ :** (ಬಂಗಾರ ಹಾಕುವವನು) ಬೆಳ್ತಿಗೆ ಅಕ್ಕಿ-1 ಕೆ.ಜಿ., ತೆಂಗಿನ ಕಾಯಿ-1, ವೀಳ್ಯದ ಪಟ್ಟೆ-1, ರೂ...?, ಸಿಹಿ ಅವಲಕ್ಕಿ ಪೊಟ್ಟಣ-1.

**ಕ್ರಮ :** ಆ ದಿನ ತಾಯಿ ಮಗುವನ್ನು ಬೆಳಿಗ್ಗೆ ಸ್ನಾನ ಮಾಡಿಸಬೇಕು. ಹವನ ಹೋಮದ ಸಮಯದಲ್ಲಿ ಮಗುವನ್ನು ಜಾಗ್ರತೆಯಿಂದ ಅಗ್ನಿಜ್ವಾಲೆಗೆ ದೂರವಾಗಿ ಹಿಡಿದುಕೊಳ್ಳಬೇಕು. ಪುರೋಹಿತರಿಗೆ ಆಸನವಾಗಿ ಮಣೆ ಕೊಡಬೇಕು. ಶೇಸಾರತಿ ತಯಾರು ಮಾಡಿ ಬೆಳ್ಳಿ ಬಟ್ಟಲಲ್ಲಿ ಸ್ವಲ್ಪ ಬೆಳ್ತಿಗೆ ಅಕ್ಕಿ ಹಾಕಿ ಅದರಲ್ಲಿ ಮಗುವಿನ ತಂದೆ 12 ಹೆಸರುಗಳನ್ನು ಬರೆಯುವ ಕ್ರಮ ಉಂಟು. ಪುರೋಹಿತರು ಹೇಳಿದಂತೆ ಶಾಸ್ತ್ರೋಕ್ತ ವಿಧಿಯಾದ ನಂತರ ಶೇಸೆ ಹಾಕಿ ಎಲ್ಲಾ ಮುತ್ತೈದೆಯರಿಂದ ಆರತಿ ಮಾಡಿ ಒಳಗೆ ಬರುವುದು. ಬಾಳಾಂತಿಗೆ ಹಾಲು ತಿಂಡಿ ಕೊಡುವುದು. ಚೀನಿವಾರನನ್ನು ಕರೆದು ಎಲ್ಲಾ ಸಾಮಾನು ಒಂದು ಹರಿವಾಣದಲ್ಲಿ ಇಟ್ಟು ಸೋದರಮಾವನ ಬಲತೊಡೆಯ ಮೇಲೆ ಮಗುವಿನ ತಲೆ ಇಟ್ಟು 'ಕಿವಿಗೆ ಟಿಕ್ಕಿ'(ಬಂಗಾರ) ಹಾಕಿಸುವುದು. ಇಷ್ಟಮಿತ್ರರೊಡಗೂಡಿ ಅನ್ನ ಸಂತರ್ಪಣೆಯ ಬಂಗಾರ ಹಾಕಿ, ಸಕ್ಕರೆ ಬಾಯಿಗೆ ಮುಟ್ಟಿಸಿ ಎಲ್ಲರಿಗೂ ಹಂಚಬೇಕು. ಮಗುವಿನ ಜನನದ ವೇಳೆ ಒಳ್ಳೆಯದಿಲ್ಲದಿದ್ದಲ್ಲಿ "ಗೃಹಚಾರ ಶಾಂತಿ" ಹೋಮ ಮಾಡಿ ತೊಟ್ಟಿಲಿಗೆ ಹಾಕುತ್ತಾರೆ. ಆಗ ಮಗುವಿನ ಒಂದು ಹೊಸ ವಸ್ತ್ರವನ್ನು ಹವನವಾದ ಮೇಲೆ ಎಲ್ಲವನ್ನೂ ಪುರೋಹಿತರಿಗೆ ಕೊಡಬೇಕು. (ಪುರೋಹಿತರಿಗೆಂದು ಅತೀ ಕಮ್ಮಿಯದ್ದು ತೆಗೆದುಕೊಳ್ಳದೆ ಒಳ್ಳೆಯ ವಸ್ತ್ರದಾನ ಮಾಡಬೇಕು). ಪುರೋಹಿತರ ತೃಪ್ತಿಯೇ ದೇವರ ತೃಪ್ತಿ.

## ತೊಟ್ಟಿಲಿಗೆ ಹಾಕುವುದು

ತೊಟ್ಟಿಲನ್ನು ಶೃಂಗರಿಸಬೇಕು. ತೊಟ್ಟಿಲಿನ ಎದುರುಗಡೆ ನಡುವಿನಲ್ಲಿ ಶ್ರೀಗಂಧ ಹಚ್ಚಬೇಕು. (ತೊಟ್ಟಿಲು ಹೊಸತಾದರೆ ಅದರಲ್ಲಿ ½ ಸೇರಿನ ಮಟ್ಟೆ ಹಾಕಿ ದನಕ್ಕೆ ತಿನ್ನಿಸಬೇಕು). ಮಗುವಿನ ಯಾವ ದೋಷವಿದ್ದರೂ ನಿವಾರಣೆಯಾಗುತ್ತದೆ. ತೊಟ್ಟಿಲು ತೊಳೆದು ಶೇಡಿ ತುಂಡಿನಿಂದ ರಂಗವಲ್ಲಿ 4 ಸುತ್ತಲೂ ಬರೆಯಬೇಕು. ನಾಲ್ಕೂ ಸರಪಳಿಗೆ 2 ಮಾವಿನ ಎಲೆ

ಇಟ್ಟು ಕಟ್ಟಬೇಕು. ಹೂವಿನ ಮಾಲೆಯನ್ನು ಕಟ್ಟಿ ನಾಲ್ಕು ಸುತ್ತಲೂ ಹೂಮಾಲೆ ಇಟ್ಟು ಅಂದವಾಗಿ ಅಲಂಕರಿಸಿ ಮೆತ್ತಗೆ ಹಾಸಿಗೆ ಹಾಸಿ ಮೃದುವಾದ ತಲೆದಿಂಬು ಇಟ್ಟು ತೊಟ್ಟಿಲ ಅಡ್ಡಕ್ಕೆ ವಸ್ತ್ರವನ್ನು ಬಿಟ್ಟು ಹಾಸುವುದು. ಒಂದು ಹರಿವಾಣದಲ್ಲಿ 'ಪಾನ ಪಾಪ್ಪಳ' 1 ಸೂಡಿ ವೀಳ್ಯದ ಎಲೆ (100), 5 ಅಡಿಕೆ, ಒಂದು ಪಾವು ಚೀನಿಸಕ್ಕರೆ, ಅಥವಾ ಮಿಠಾಯಿ ಉಂಡೆ. ಇನ್ನೊಂದು ಹರಿವಾಣದಲ್ಲಿ ಮಗುವಿನ ಬಂಗಾರ (ಗೋಲ, ಸರಪಳಿ, ಉಂಗುರ ಇತ್ಯಾದಿ) ಮತ್ತೆ ವಸ್ತ್ರ ಬೈರಾಸು ಅಂಗಿ ಹೀಗೆ 5 ಹರಿವಾಣ ಹಿಡಿದು 5 ಹೆಂಗಸರು ತೊಟ್ಟಿಲ ಹತ್ತಿರ ಇಡುವುದು. ಬಲಭದ್ರ (ಅಂದರೆ ಕೃಷ್ಣನ ಅಣ್ಣ ಬಲರಾಮ) ಒಂದು ಚಿಕ್ಕ ಶಿಲೆಕಲ್ಲಿಗೆ ವಸ್ತ್ರ ಸುತ್ತಿ ಕಾಡಿಗೆ, ಗಂಧ ಹಚ್ಚಿ ಬಂಗಾರದ ಸರಪಳಿ ಸಹಾ ಹಾಕಿ ಬಲಭದ್ರನನ್ನು ತೊಟ್ಟಿಲಿಗೆ ಹಾಕಿ (5 ಸಾರಿ) ಬಲಬದಿಯಲ್ಲಿ ಇಡುವುದು. ಇದನ್ನು ಮಗುವಿನ ಇಬ್ಬರೂ ಅಜ್ಜಿಯರು ಅತೀ ಸಂಭ್ರಮದಿಂದ ಮಾಡುವುದು. ನಂತರ ಇಬ್ಬರೂ ಮಗುವನ್ನು ನಾಲ್ಕು ಸಾರಿ ತೊಟ್ಟಿಲಿನಲ್ಲಿ ಇಟ್ಟ ಹಾಗೆ ಮಾಡಿ ಅಡಿಯಿಂದ ಆಚೆಕಡೆ ಇದ್ದ ಅಜ್ಜಿಯ ಹತ್ತಿರ ಕೊಡುವುದು. (ಈಗ ಸ್ಟೇಂಡಿನ ತೊಟ್ಟಿಲು ಆದ ಕಾರಣ ಮೇಲಿನಿಂದಲೇ ಕೊಡುವುದು). 5ನೇ ಸಾರಿ ತೊಟ್ಟಿಲಲ್ಲಿ ಮಲಗಿಸಿ ಬಲಕಿವಿಯಲ್ಲಿ ತಮ್ಮ ಕುಲದೇವರ ಹೆಸರನ್ನು 5 ಬಾರಿ ಕರೆಯುವುದು. ನಂತರ ತಾವು ಕರೆಯುವ ಹೆಸರನ್ನು ಎಲ್ಲರಿಗೂ ಕೇಳುವಂತೆ ಕರೆಯುವುದು. ತಾವು ತಂದ ಚೀನಿ ಸಕ್ಕರೆ ಮಗುವಿನ ಬಾಯಿಗೆ ತಾಗಿಸಿ, ಚಿನ್ನವನ್ನು ಹಾಕಿ, ಉಡುಗೊರೆ ಮಾಡಿ ಎಲ್ಲರಿಗೂ ಮಗುವಿನ ಹೆಸರು ತಿಳಿಸಿ, 5 ಸಣ್ಣ ಮಕ್ಕಳ ಬೆನ್ನನ್ನು ತೊಟ್ಟಿಲಿಗೆ ತಾಗಿಸಿ (ಸಣ್ಣ ಪೆಟ್ಟು ಕೊಟ್ಟ ಹಾಗೆ) ಕೈ ಮುಟ್ಟಿಸಿ ಬಿಡಬೇಕು. ನಂತರ ಮಗುವಿನ ತಂದೆ, ತಾಯಿ ಉಡುಗೊರೆ ಮಾಡಿ ಬಾಕಿ ಎಲ್ಲರೂ ಉಡುಗೊರೆ ಮಾಡುವುದು. ಮಗುವಿನ ಸೋದರಮಾವನಿಂದ ಕಾಲಿಗೆ 'ಗೆಜ್ಜೆ' ಸರಪಳಿ ಹಾಕಿಸುವುದು. ನಂತರ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು (ಬಾರ್ಸೋ ಆದರೆ ಮಾತ್ರ), ಉಳಿದವರೊಡನೆ ಫಲಾಹಾರ.

## ಪೊಂಣ್ತೆ ವಾತಿ (ಪಪೌತ್ರ ದರ್ಶನ)

ಈ ವಿಧಾನವನ್ನು ಮಗುವನ್ನು ತೊಟ್ಟಿಲಲ್ಲಿ ಹಾಕುವ ಮೊದಲು ಮಾಡುವ ಕ್ರಮ. (ಮುತ್ತಜ್ಜಿ-ಮಗುವಿನ ತಂದೆಯ ಅಜ್ಜಿ) ಮಗು ಹುಟ್ಟಿದ ನಂತರ ಅದನ್ನು 12 ದಿನಗಳ ತನಕ ನೋಡಲಿಕ್ಕಿಲ್ಲ. 12ನೇ ದಿನ ಪೊಂಣ್ತೆ ವಾತಿ ಮೂಲಕ ತನ್ನ ನೆಚ್ಚಿನ ಪೊಂಣ್ತೆಯನ್ನು ಪ್ರಥಮವಾಗಿ ನೋಡುವ ಭಾಗ್ಯವನ್ನು ಪೊಂಣ್ತ್ರಾ ಮುಖ ನೋಡುವುದು ಎನ್ನುತ್ತಾರೆ. ಮುತ್ತಜ್ಜಿಯು ತನ್ನ ಮೊಮ್ಮಗನ (ಮಗನ ಮಗ) ಗಂಡು ಮಗುವಿಗೆ ಪೊಂಣ್ತ್ರಾ ಎನ್ನುವುದು. ಹೆಣ್ಣು ಮಗು ಹುಟ್ಟಿದರೆ ಪೊಂಣ್ತೆ ಎನ್ನುತ್ತಾರೆ. ಇಂತಹ ನಾಲ್ಕನೇ ತಲೆಮಾರಿನ ಮಗುವನ್ನು ಬೆಳ್ಳಿ ಹಣತೆಯಲ್ಲಿ ಚಿನ್ನದ ಬತ್ತಿ ಮಾಡಿ ತುಪ್ಪದಲ್ಲಿ ಬೆಳಗಿಸಿ ನೋಡುವ ಕ್ರಮಕ್ಕೆ 'ಪೊಂಣ್ತೆ ವಾತಿ' ಎನ್ನುತ್ತಾರೆ. ಈ ಕಾರ್ಯಕ್ರಮವನ್ನು ಮನೆಯ ಪುರೋಹಿತರು ಅಥವಾ ಭಟ್ಟರೂ ಮಾಡಬಹುದು. ಒಳ್ಳೆ ಮುಹೂರ್ತದಲ್ಲಿ ಬೆಳಿಗ್ಗೆ 10 ರಿಂದ 12 ಗಂಟೆಯೊಳಗೆ ಮಾಡಿದರೆ ಉತ್ತಮ.

**ಪೊಂಣ್ತಿ ವಾತಿ :** ಚಿನ್ನದ ಸಪೂರ ¼ ಇಂಚಿನ ಸರಿಗೆಯನ್ನು ಉರುಟುರಿಂಗ ಮಾಡಿ ಅದನ್ನು ಬೆಳ್ಳಿಯ ಹಣತೆಯಲ್ಲಿ ಇಟ್ಟು ಅದರಲ್ಲಿ ಹತ್ತಿಯ ಬತ್ತಿ ಹಾಕಿ ತುಪ್ಪ ಹಾಕಿ ಬತ್ತಿಯನ್ನು ಬೆಳಗಿಸಿ ಮುತ್ತಜ್ಜಿ ಪೊಂಣ್ತಿ ವಾತಿ (ಮಗುವಿನ ಮುಖ ನೋಡಿ ಪುರೋಹಿತರಿಗೆ ದಕ್ಷಿಣೆಯೊಂದಿಗೆ ಆ ಪೊಂಣ್ತಿಯನ್ನು ದಾನ ಮಾಡಿ ಕೊಡುವುದು.

**ತಯಾರಿ :** ಅಲಂಕೃತದೀಪ-1, ತಟ್ಟೆ ಚಿಪ್ಪುಟ-1, ಹರಿವಾಣ-1, ಪುರೋಹಿತರಿಗೆ ಹರಿವಾಣ-1, ಹೂ ಕುಂಕುಮ, ಬಾಳೆಎಲೆ ತುದಿದು -2, ಬೆಳ್ತಿಗೆ ಅಕ್ಕಿ-1 ಕೆ.ಜಿ., ತೆಂಗಿನಕಾಯಿ-1, ವೀಳ್ಯದ ಪಟ್ಟಿ-1, ಸಕ್ಕರೆ ಅಥವಾ ಮಿಠಾಯಿ, ಪುರೋಹಿತರಿಗೆ ಕುಳಿತುಕೊಳ್ಳಲು ಮಣೆ ಮತ್ತು ಸಣ್ಣ ಬೈರಾಸು.

**ಮಾಡುವ ಕ್ರಮ :** ಮುತ್ತಜ್ಜಿಯು ಮಣೆಯಲ್ಲಿ ಕುಳಿತು ಆಚ್ಮನ ಮಾಡಿ ಎರಡೂ ಕಣ್ಣಿಗೂ ನೀರು ತಾಗಿಸಿ ಶ್ರೀ ಗಣೇಶನನ್ನು ಸ್ಮರಿಸಿ ಪುರೋಹಿತರು ಹೇಳಿದಂತೆ ಮಾಡಿ ಮಗುವಿನ ಮತ್ತು ತನ್ನ ಮಧ್ಯೆ ಅಡ್ಡವಾಗಿ ಹಿಡಿದ ಬೈರಾಸನ್ನು ಸರಿಸಿ ಕೈಯಲ್ಲಿ ಬೆಳಗಿದ ಪೊಂಣ್ತಿಯನ್ನು ಹಿಡಿದು ಮಗುವನ್ನು ಅತೀ ಆನಂದದಿಂದ ವೀಕ್ಷಿಸಬೇಕು. ನಂತರ ಮಗುವನ್ನು ತನ್ನ ತೊಡೆಯ ಮೇಲೆ ಹಿಡಿದು ಅದರ ನೆತ್ತಿಗೆ (ತಾಳ್ವತಿ) ಮೂರು ಸಾರಿ ಮೂಸಬೇಕು. ನಂತರ ಪ್ರೀತಿಯಿಂದ ಒಂದು ಮುತ್ತು ಕೊಟ್ಟು, ತಲೆ ಮೇಲಿನಿಂದ ಕೈ ಬಳಸಿ ಆಶೀರ್ವಾದ ಮಾಡಿ, ಬಾಯಿ ಸಿಹಿ ಮಾಡಿ ತನ್ನ ಉಡುಗೊರೆಯಾದ ಸರಪಳಿ ಅಥವಾ ಉಂಗುರ, ವಸ್ತ್ರ ಉಡುಗೊರೆಯಾಗಿ ಕೊಟ್ಟು ದೀರ್ಘಾಯುವಾಗಿ ಬಾಳೆಂದು ಮಗುವನ್ನು ಹರಸಿ ಇತರರ ಹತ್ತಿರ ಕೊಡುವುದು. ಪುರೋಹಿತರಿಗೆ ಹಣತೆಯನ್ನು ದಾನ ಮಾಡಿ ದಕ್ಷಿಣೆ ರೂ....? ಕೊಟ್ಟು ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ಒಂದು ವೇಳೆ ಬಾರ್ಸೊ ಇದ್ದರೆ ಈ ಕ್ರಮವನ್ನು 'ಹವನ' ಆಗಿ ಬಾಳಾಂತಿ ಮಗು ಒಳಗೆ ಹೋದ ನಂತರ ಮಾಡಬೇಕು. ಹವನ ಸಮಯದಲ್ಲಿ ಬಾಳಾಂತಿಗೆ ಗಂಡನ ಕಡೆಯವರೂ ತಾಯಿಯ ಕಡೆಯವರೂ ಮಡಿಲು ತುಂಬಿಸಿ (ವ್ಹಂಟಿ ಭೋರ್ನು) ಶೇಸಾರತಿ ಮಾಡುವುದು. ಬಾರ್ಸೊ ಇಲ್ಲದಿದ್ದಲ್ಲಿ ಮಗು ತೊಟ್ಟಿಲಿಗೆ ಹಾಕುವ ಮೊದಲು ಬಾಳಾಂತಿಗೆ ಎರಡೂ ಕಡೆಯವರು ವ್ಹಂಟಿ ತುಂಬಿಸಬೇಕು. ನಂತರ ಮಗುವನ್ನು ತೊಟ್ಟಿಲಿಗೆ ಹಾಕುವ ಕ್ರಮ.

## ಚೌಲು ಮತ್ತು ಉಪನಯನ



ಗಂಡು ಮಕ್ಕಳಿಗೆ ಮೂರು ಅಥವಾ ಐದು ವರ್ಷದಲ್ಲಿ ಚೌಲು ಮಾಡುತ್ತಾರೆ. ಚೌಲು ಮಾಡುವ 5 ದಿವಸಕ್ಕೆ ಮುಂಚೆ ನಾಂದಿ ಇಡಬೇಕು. ನಾಂದಿ ಇಡುವ ಕ್ರಮ ಹಿಂದಿನ ಪುಟಗಳಲ್ಲಿ ಬರೆದಿದೆ. ಚೌಲು, ಉಪನಯನ, ಮದುವೆಗೆ ನಾಂದಿ ಇಡುವ ಕ್ರಮ ಒಂದೇ

ಪ್ರಕಾರ. ಉದ್ದಿನ ಮುಹೂರ್ತವೂ ಚೌಲು ಮತ್ತು ಉಪನಯನಕ್ಕೆ ಒಂದೇ ಪ್ರಕಾರ. ನಾಂದಿ ಇಟ್ಟ ದಿನ 5 ಮನೆಗಳಲ್ಲಿ "ಹೇಳಿಕೆ" ಮಾಡಿ ಪಾಯಸದ ಊಟ ಮಾಡಬೇಕು. "ನಾಂದಿ" ದೇವರಿಗೆ ಪ್ರತೀದಿನ ಸಕ್ಕರೆ ನೈವೇದ್ಯ ಆರತಿ ಮಾಡಬೇಕು. (ಶುಭಕಾರ್ಯಗಳು ಮುಗಿಯುವ ತನಕ)

## ಉಪನಯನ



ಗಂಡು ಮಕ್ಕಳಿಗೆ 7,9 ಅಥವಾ 11 ವರ್ಷದಲ್ಲಿ ಉಪನಯನ ಮಾಡುವುದು ಅಗತ್ಯ. ನಾಂದಿಯನ್ನು ಇಡುವ ಕ್ರಮ ಹಿಂದೆ ವಿವರಿಸಿದೆ. ನಾಂದಿ ಇಡುವ ದಿನ "ವಟು" (ಅಂದರೆ ಮುಂಜಿ ವರೇತು) ಮತ್ತು ತಂದೆ ತಾಯಿ ತಲೆ ಸ್ನಾನ ಮಾಡಬೇಕು. ಪುರೋಹಿತರು ಬಂದ ನಂತರ ಶ್ರೀ ಗಣೇಶನಿಗೆ 1¼ ರೂ. ಕುಲದೇವರಿಗೆ 1¼ ರೂ., 'ಕಾಣಿಕೆ' ಇಟ್ಟು ಪುರೋಹಿತರಿಗೆ ಹಿರಿಯರಿಗೆ ಕಾಲುಮುಟ್ಟಿ ನಮಸ್ಕರಿಸಬೇಕು. ವಟು ಮತ್ತು ತಂದೆ ಪಟ್ಟೆ ಧೋತಿ (ಪಾಟ್ಟೆ ತೊಡುಪು) ಉಡಬೇಕು. ತಲೆಗೆ ರುಮಾಲು ಕಟ್ಟಿ ಶಾಲು ಅಥವಾ ಬೈರಾಸು ಹೊದೆಯಬೇಕು. 'ವಟು'ವಿಗೆ ತಲೆಗೆ ಟೊಪ್ಪಿ ಕೈಗೆ ಬಳೆಗಳು ಕತ್ತಿನಲ್ಲಿ ಸರ ಧರಿಸಬೇಕು. ನಾಂದಿ ಇಟ್ಟ ನಂತರ 6 ದಿನದ ವರೆಗೆ ಲಗ್ನವಾಗುವ ತನಕ ವಟುವನ್ನು ದೂರ ಅಥವಾ ಪರವೂರಿಗೆ ಕಳುಹಿಸಬಾರದು.

**ಲಗ್ನದ ಮುಂಚಿನ ದಿನ ಮಾಡುವ ತಯಾರಿ :** ಮುಂಚಿನ ದಿನ ಅಡಿಗೆಗೆ ಸಾಮಾನು ಕಾಯಿಪಲ್ಯ, ತಿಂಡಿ ಡಬ್ಬೆಗಳು, ಬಾಳೆಎಲೆ, ಪುರೋಹಿತರು ಹೇಳಿದ ಸಾಮಾನು ಎಲ್ಲಾ ಹೋಲ್‌ಗೆ ತಂದು ಕೋಣೆಯಲ್ಲಿಟ್ಟು ಬೀಗ ಹಾಕಬೇಕು. ಕಾಲುದೀಪ, ಮಣೆಗಳು ಪಟ್ಟೆ ವಸ್ತ್ರ, ಪಿಟ್ಟಾದಿವ್ವೆ-8, ಹರಿವಾಣಗಳು-5, ಚಂಬು-2, (ಧಾರೆ ಎರೆಯಲು ಬೆಳ್ಳಿದ್ದು ಅಥವಾ ತಾಮ್ರದು) ಪುರೋಹಿತರು ಹೇಳಿದ ಹಾಗೆ ಬೆಳ್ತಿಗೆ ಅಕ್ಕಿ, ತೆಂಗಿನಕಾಯಿ ಬಾಳೆಎಲೆ, ಅರಸಿನ ಹುಡಿ, ಬೀಸುವಕಲ್ಲು, ಸ್ವಲ್ಪ ತೆಂಗಿನ ಎಣ್ಣೆ, ದನದ ತುಪ್ಪ, ಕದಳಿ ಬಾಳೆಹಣ್ಣಿನ ಗೊನೆ, ಹಲಸಿನ ಕೆತ್ತೆ, ಉದ್ದಿನ ಮುಹೂರ್ತಕ್ಕೆ ಉದ್ದು 1 ಕೆ.ಜಿ., ಹೆಸ್ರು, 1 ಕೆ.ಜಿ., ಅಕ್ಕ-ತಂಗಿಯರು ವಟುವಿಗೆ ಕಾಡಿಗೆ ಹಾಕುವುದು, ಮುಖ್ಯ ಉದ್ದು ಬೀಸುವುದು. ನಂತರ 8 ಮಕ್ಕಳಿಗೆ ಗಂಡು ವಟುವಿನೊಡನೆ ಕುಳ್ಳಿರಿಸಿ ಸಿಹಿ ಮೊಸರು ಅವಲಕ್ಕಿ ಬಡಿಸಬೇಕು. ವಟುವಿನ ತಾಯಿ ತನ್ನ ಪ್ರೀತಿಯ ಮಗುವನ್ನು ಕಾಲಿನಲ್ಲಿ ಕುಳ್ಳಿರಿಸಿ 5 ಸಾರಿ ಅವಲಕ್ಕಿಯನ್ನು ಮಗನ ಬಾಯಲ್ಲಿ ಹಾಕಬೇಕು. ಇತರ ಮಕ್ಕಳೂ ಸಹ ತಿನ್ನಬೇಕು. ಇದಾದ ನಂತರ ಕ್ಷೌರಿಕನ ಹತ್ತಿರ ಸೋದರಮಾವನೊಡನೆ ಬಂದು ಕೂದಲು ಸ್ವಲ್ಪ ತೆಗಿಸುವುದು. ನಂತರ ತಾಯಿ ಅಥವಾ ಹಿರಿಯರಿಂದ ಅರಸಿನ ತಾಗಿಸಿ ಸ್ನಾನ ಕ್ಷೌರಿಕನಿಗೆ ಅಕ್ಕಿ, ತೆಂಗಿನಕಾಯಿ, ಬೈರಾಸು, ವೀಳ್ಯದ ಪಟ್ಟಿ, ರೂ. ಹರಿವಾಣದಲ್ಲಿ ಕೊಡುವುದು. ಸ್ನಾನದ ನಂತರ ಕಾಫಿ, ಹಾಲು, ತಿಂಡಿ ತಿಂದು

ನಂತರ ಪುರೋಹಿತರಿಂದ ನಾಮ (ಗೋಪಿಚಂದನದ) ಗಳನ್ನು ಹಾಕಿಸುವುದು. ಪಟ್ಟೆವಸ್ತ್ರ ಉಡಿಸಿ ತಲೆಗೆ ಹೂವಿನ ಟೊಪ್ಪಿ ಇಟ್ಟು ಕೈಯಲ್ಲಿ ಒಂದು ತೆಂಗಿನಕಾಯಿ ಕೊಟ್ಟು ಕುಳ್ಳಿರಿಸುವುದು.

**ಲಗ್ನದ ಮಂಟಪದಲ್ಲಿ ತಯಾರಿ :** 4 ಹೆಣ್ಣು ಮಕ್ಕಳನ್ನು ಹೂ, ಕುಂಕುಮ, ಗಂಧ ಗುಲಾಬದಾನಿಯೊಂದಿಗೆ ಆದರ ಸ್ವಾಗತ ಮಾಡಲು ನಿಲ್ಲಿಸುವುದು. ಮಂಟಪದಲ್ಲಿ ಸ್ವಚ್ಛವಾಗಿ ಗುಡಿಸಿ ಭಟ್ಟರು ಹೇಳಿದ ಸಾಮಾನು ತಂದು ಇಡುವುದು. ಮಣೆಗಳು-4, ಅದರ ಮೇಲೆ ಹಾಸಲು ಪಟ್ಟೆ ವಸ್ತ್ರ, ಅಂತರಪಾಟು, 'ಜನ್ವಾಳಿ' ಎಂಬ ಚಿನ್ನದ ಜನಿವಾರ, ಧಾರೆ ಎರೆಯಲು ಬೆಳ್ಳಿದ್ದು ಅಥವಾ ಕಂಚಿನ ಚಂಬು, 'ಭಿಕ್ಷೆ' ಹಾಕಲು ಬೆಳ್ಳಿ ಅಥವಾ ಸ್ಟೀಲಿನ ಬಟ್ಟಲು. ಇದೆಲ್ಲವನ್ನು ಪುರೋಹಿತರ ಹತ್ತಿರ ಕೊಡಬೇಕು. ಕಾವಿ ಟೊಪ್ಪಿ, ಕಾವಿ ಬೈರಾಸು ಸಣ್ಣದು-1, ಕಾವಿ ಬೈರಾಸು ದೊಡ್ಡದು-2, ಅಕ್ಕ ತಂದಿಯರಿಗೆ ಉಡುಗೊರೆ (ತಳಿ) ರೂ. ಎಳ್ಳಿನ ಉಂಡೆ (ತಿಳ್ಯಾ ಉಂಡೊ)

**ಲಗ್ನ :** ಕ್ಲಪ್ತ ಸಮಯದಲ್ಲಿ ತಂದೆ ತಾಯಿ ಮಂಟಪದಲ್ಲಿ ಬರುವುದು. ಶಾಸ್ತ್ರ ಪ್ರಕಾರ ಅಲ್ಲಿಯ ಕೆಲಸ ಆದ ನಂತರ ಶೃಂಗರಿಸಿದ ವ್ಹರೆತು (ವಟು)ವನ್ನು ಸೋದರಮಾವನು ಎತ್ತಿ ಮಂಟಪದಲ್ಲಿ ಬಲಕಾಲು ಇಟ್ಟು ತರಬೇಕು. ನಂತರ ವಟುವಿನ ತಲೆಯಲ್ಲಿ ಅಕ್ಷತೆ ಹಾಕಿ ಆಶೀರ್ವದಿಸಿ ಹೊರಗೆ ಬರುವುದು. ವಟುವಿನ ತಾಯಿ ತಂದೆಯವರು 'ಸಭಾವಂದನೆ'ಗೆ ಬಂದ ಅತಿಥಿಗಳಿಗೆ ಮೊದಲು ನಮಸ್ಕರಿಸಿ, ಪುರೋಹಿತರ ಕಾಲು ಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆದು (ಅದು ಮುಖ್ಯ) ತಮ್ಮ ಮಾತಾಪಿತ್ರರು ಕುಟುಂಬದ ಹಿರಿಯರ ಆಶೀರ್ವಾದ ಪಡೆದು ತಮ್ಮ ನೆಚ್ಚಿನ ಮಗನಿಗೆ 'ಉಪದೇಶ' ಕೊಡಲು ಮಂಟಪದಲ್ಲಿ ಬರುವುದು. ಈ 'ಮಹಾಮಂತ್ರ'ವನ್ನು ಮಗನಿಗೆ ಉಪದೇಶಿಸಿ ಅದನ್ನು ಅನುಗಾಲವೂ ಕಡ್ಡಾಯವಾಗಿ ಮಾಡುವಂತೆ ನಿರ್ಧರಿಸಬೇಕು. 'ಈ ಮಂತ್ರವೇ ಗಾಯತ್ರಿ ಮಂತ್ರ' ಆ ಮಂತ್ರವೇ ಜೀವನದ ಅಡಿಗಲ್ಲು ಈ ಮಂತ್ರ ಶಕ್ತಿ ಪಡೆದವರು (ಬಲ್ಲವರು) ಸಂಸಾರದಲ್ಲಿ ಎಂದೂ ಭಯಪಡದೆ ನಿರ್ಭಯವಾಗಿ ಸಂತೃಪ್ತಿಯಲ್ಲಿರುತ್ತಾರೆ. ಅದಲ್ಲದೆ ಅವರಿಗೆ ಶ್ರೀ ದೇವರ, ಗುರುಗಳ ಅಭಯ ಹಸ್ತದ ಆಶೀರ್ವಾದವು ಅನುಗಾಲವೂ ಪ್ರಾಪ್ತವಾಗುತ್ತದೆ.

ತಂದೆಯ ಉಪದೇಶದ ನಂತರ ಪುರೋಹಿತರು "ದಂಡಕಾಷ್ಟ" ಎಂಬ ಮರದ ಬೆತ್ತವನ್ನು ವಟುವಿನ ಬಲಕೈಯಲ್ಲಿ ಕೊಟ್ಟು ಅದರ ಉಪಯೋಗ, ಸಹಾಯವನ್ನು ಅವರು ಬಹಳ ಚಲೋದಾದ ರೀತಿಯಲ್ಲಿ ಉಪದೇಶ ಮಾಡುತ್ತಾರೆ. ಅದನ್ನು ಭಕ್ತಿಯಿಂದ ಕೇಳಿ ಹಾಗೆಯೇ ಮಾಡುವುದು ವಟುವಿನ ಮುಖ್ಯ ಕರ್ತವ್ಯ. ವಟುವಿನ ಬಲತೊಡೆ (ಜಾಂಗ)ಯಲ್ಲಿ ಬೆಳ್ಳಿ ಬಟ್ಟಲು ಇಟ್ಟು ತಾಯಿ ಪ್ರಥಮವಾಗಿ "ಭಿಕ್ಷೆಯನ್ನು 5 ಸಾರಿ ಮಾಡಿ ನೀಡಬೇಕು". ತಾಯಿ ಭಿಕ್ಷೆ ಹಾಕುವಾಗ "ಭವತೀ ಭಿಕ್ಷಾಂದೇಹಿ" ತಂದೆಗೆ "ಭವಾನ್ ಭಿಕ್ಷಾಂದಧಾತೋ" ಎಂದು ಹೇಳಬೇಕು. ನಂತರ ಬಾಕಿಯವರು ಭಿಕ್ಷೆ ಹಾಕುವುದು. (ಉಪನಯನಕ್ಕೆ ಭಿಕ್ಷೆ

ಮುಖ್ಯ, ಉಡುಗೊರೆ ಅಲ್ಲ). ಈ ಕ್ರಮವಾದ ಮೇಲೆ "ವಟು"ವಿನ ಅಕ್ಕ ತಂಗಿಯವರು "ತಳಿ"ಯನ್ನು ಉಡುಗೊರೆ ಮಾಡುವುದು. ಮೊದಲು ಎಳ್ಳಿನ ಉಂಡೆಯನ್ನು ತನ್ನ ಪ್ರೀತಿಯ ತಮ್ಮನ ಬಾಯಿಯಲ್ಲಿ ಕೊಟ್ಟು ನಂತರ ಉಡುಗೊರೆ ಮಾಡಿ ತಮ್ಮನಿಂದ ಉಡುಗೊರೆ ಪಡೆಯುವುದು. ವಟುವು ಸೂರ್ಯದೇವರಿಗೆ ನಮಸ್ಕಾರ ಮಾಡಿ ಬಂದು, ಮಂಟಪದ ಹತ್ತಿರ ದೆಡ್ಡೆಯೊಡನೆ ನಿಲ್ಲಿಸಿ ಪಿಟ್ಟಾದಿವ್ವೆ ತೋರಿಸಬೇಕು. ಉಪನಯನದ ಎಲ್ಲಾ ವಿಧಾನದ ನಂತರ ವಟು, ತಂದೆ, ತಾಯಿ, ದೆಡ್ಡೊ ಹೀಗೆ ನಾಲ್ಕು ಜನರು ಕೂತು ಶೇಸಾರತಿ ಮಾಡುವುದು. ವೃಂದಮಾತೆಗೆ (ತುಳಸಿ) ಪೂಜೆ ಮಾಡಿ 5 ಪ್ರದಕ್ಷಿಣೆ ಬಂದು 5 ಸಾರಿ ನೀರು ಹಾಕಿ ಸೂರ್ಯನಿಗೆ ನಮಸ್ಕಾರ ಮಾಡಬೇಕು. ನಂತರ ತಂದೆಯು ಕಲಶವನ್ನು ಹಿಡಿದು ಘಡ್ಯೆಉದ್ಧಾಕ ಇಟ್ಟ ಸ್ಥಳದಲ್ಲಿ ಬಂದು ಕಲಶವನ್ನು ಕೆಳಗೆ ಇಟ್ಟು ಒಂದು ಪ್ರದಕ್ಷಿಣೆ ಬಂದು ಭಕ್ತಿಯಿಂದ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು.

## ಊಟ

ಬ್ರಾಹ್ಮಣ ಸಂತರ್ಪಣೆ, ಕಾಗೆಗೆ ವ್ಯಾಸು ಇಡಬೇಕು. 'ಚಿತ್ರಾವತಿ' ಇಡಲು ವಟುವಿಗೆ ಕಲಿಸಿ ನಂತರ ಊಟ ಮಾಡುವುದು. ಊಟದ ನಂತರ ಕಡೆಗೆ ಸ್ವಲ್ಪ ನೀರನ್ನು ಕೈಯಲ್ಲಿ ಹಿಡಿದು ತೀರ್ಥದಂತೆ ತೆಗೆದುಕೊಳ್ಳಬೇಕು. ನಂತರ ವಟುವು ಊಟ ಮಾಡಬಾರದು. (ಅದಕ್ಕೆ ಗೋಟ್ನಿ ಎನ್ನುತ್ತೇವೆ). ಭೋಜನವಾದ ಮೇಲೆ ಬ್ರಾಹ್ಮಣರಿಗೆ ಭೋಜನ ದಕ್ಷಿಣೆ ಕೊಟ್ಟು ತೃಪ್ತಿಪಡಿಸಬೇಕು. ಸಂಜೆ ಗ್ರಾಮ ದೇವಸ್ಥಾನದಲ್ಲಿ ಹಣ್ಣುಕಾಯಿ ಮಾಡಿಸಿ ಬಂದು ವಟುವಿಗೆ ಮನೆಯ ಮೆಟ್ಟಿಲ ಹತ್ತಿರ ನಿಲ್ಲಿಸಿ ಕುಂಕುಮ ನೀರು "ಉವಾಳಿಸಿ" ಬಿಸಾಡಬೇಕು. ಮನೆ ದೇವರಿಗೆ ವಂದಿಸಿ ಸಂಧ್ಯಾವಂದನೆ ಮಾಡಬೇಕು. ವಟುವಿಗೆ ರಾತ್ರಿ ಊಟ ಇಲ್ಲ 'ಫಲಾಹಾರ ಮಾತ್ರ' ವಟುವಿನ ದಂಡಕಾಷ್ಠವನ್ನು ತುಳಸಿ ಕಟ್ಟೆಯಲ್ಲಿ ಇಟ್ಟದನ್ನು ಮೊದಲ ನೂಲಹುಣ್ಣಿಮೆಯ ದಿನ ದೇವಸ್ಥಾನದಲ್ಲಿ ಪೂಜಿಸಿ ವಿಸರ್ಜಿಸುವುದು. ಹಿರಿಯರಿಗೆ ಜನಿವಾರ ಕೊಟ್ಟು ಆಶೀರ್ವಾದ ಪಡೆಯಬೇಕು. ಆ ದಿವಸ ರಾತ್ರಿ ವಟುವಿಗೆ ಊಟ ಇಲ್ಲ.

**ಸಂಪೂರ್ಣ ಕುಂಭೋ ನ ಕರೋತಿ ಶಬ್ದಮ್**
**ಅರ್ಧೋ ಘಟೋ ಶಬ್ದಮುಪೈತಿ ನೂನಂ।**
**ವಿದ್ವಾನ್ ಕುಲೀನೋ ನ ಕರೋತಿ ಗರ್ವಂ**
**ಗುಣೈರ್ವಿಹೀನಾಃ ಬಹುಜಲ್ಪಯಂತಿ॥**

"ತುಂಬಿದ ಕೊಡವು ಶಬ್ದವನ್ನು ಉಂಟುಮಾಡುವುದಿಲ್ಲ. ಅರ್ಧ ತುಂಬಿದ ಕೊಡವು ನಿಶ್ಚಯವಾಗಿ ಶಬ್ದವನ್ನು ಉಂಟುಮಾಡುತ್ತದೆ. ಒಳ್ಳೆಯ ಕುಟುಂಬದಲ್ಲಿ ಜನಿಸಿದ ವಿದ್ಯಾವಂತನು ಅಹಂಕಾರ ಪಡುವುದಿಲ್ಲ. ಗುಣ ಇಲ್ಲದೇ ಇರುವವರು ತುಂಬಾ ಗರ್ವದಿಂದ ಮಾತನಾಡುತ್ತಾರೆ".

# ಗೃಹ ಪ್ರವೇಶ



**ತಯಾರಿ :** ಶ್ರೀ ಗುರುಗಳ ಫೋಟೊ, ಕುಲದೇವರ ಫೋಟೊ, ಶ್ರೀ ಗಣಪತಿ ಮೂರ್ತಿ (ಅಥವಾ ಫೋಟೊ) ವಿಠಲ ರಖುಮಾಯಿ ಮೂರ್ತಿ, ಅನ್ನಪೂರ್ಣೆ, ಸಣ್ಣದೀಪಗಳು, ದೇವರಕೋಣೆ (ಪ್ರಾರ್ಥಿಸುವ ಕೋಣೆ)ಯಲ್ಲಿ ಇಡಲು ಇಷ್ಟೆಲ್ಲಾ ಅಗತ್ಯ. ಹಾಲು ಸಕ್ಕರೆ ಇಡಲು ಸಣ್ಣ ದೊಣ್ಣೆಗಳು, ಹರಿವಾಣ-1, ತಟ್ಟೆ ಚಿಪ್ಪುಟ, (ಶ್ರೀ ಮುದ್ರೆಗಳು-5), ಚಕ್ರಮುದ್ರೆ ಶಂಖ, ಪದ್ಮ, ಗದಾ ನಾರಾಯಣ ಮುದ್ರೆಗಳು, ಸಂಧ್ಯಾವಂದನೆಗೆ ನೀರು ತರಲು ಚಂಬು, ಗೋಪಿಚಂದನ, ಗಂಧ, ಕುಂಕುಮ, ಹೂ ಇತ್ಯಾದಿ. ಪೂಜೆಗೆ ಆರತಿ, ಅಗರಬತ್ತಿ ಸ್ಟ್ಯಾಂಡ್, ಶಂಖ, ಜಾಗಟೆ, ದೊಡ್ಡ ಕಾಲುದೀಪ.

**ಗೃಹಪ್ರವೇಶ ಮಾಡುವಾಗ ಬೇಕಾಗುವ ಸಾಮಾನು :** ಅಕ್ಕಿ ಗುಡಾಣ, (ತಾಂದ್ಲಾ ಮಡ್ಕಿ) ಅಲಂಕೃತ ದೀಪ, ಹೂ ಕುಂಕುಮ, ಶೇಸೆ, ಆರತಿ, ಹಾಲು ಉಳ್ಳ ಪಾತ್ರೆ, ತೊಟ್ಟಿಲು, ಹಣದ ಪೆಟ್ಟಿಗೆ, ಬಂಗಾರ ಪೆಟ್ಟಿಗೆ ಇದನೆಲ್ಲಾ ಒಬ್ಬೊಬ್ಬರು ಒಂದೊಂದು ಹಿಡಿದು ಸುಮುಹೂರ್ತದಲ್ಲಿ ಗೃಹಪ್ರವೇಶ ಮಾಡುವುದು. ನಂತರ ಪುರೋಹಿತರು ಹೇಳಿದ ಸಮಯದಲ್ಲಿ ಹಾಲು ಬಿಸಿ ಮಾಡಿ ಸಕ್ಕರೆ ಬೆರಸಿ ಎಲ್ಲರಿಗೂ ಹಂಚಬೇಕು. ಪ್ರಥಮವಾಗಿ ಪುರೋಹಿತರಿಗೆ ಕೊಟ್ಟು ಮನೆಯ ಹಿರಿಯ ಯಜಮಾನರಿಗೆ ಕೊಟ್ಟು ನಂತರ ಎಲ್ಲಾ ಮಕ್ಕಳಿಗೆ ಕೊಡಬೇಕು. ಅನಂತರ ಅಡಿಗೆ ಮಾಡಿ ಇಷ್ಟ ಮಿತ್ರರೊಡನೆ ಭೋಜನ.

**ಮನೆಗೆ ಬೇಕಾದ ಸಾಮಾನು :** ಫರ್ನಿಚರ್, ಅನ್ನದ ಪಾತ್ರೆ, ಪದಾರ್ಥಕ್ಕೆ ಸ್ಟೀಲಿನ ತೋಪುಗಳು, ಮುಚ್ಚಲು ಮಾಂಡಿಗಳು, ಗ್ಲಾಸುಗಳು-6, ಪ್ಲೇಟುಗಳು-6, ಚಮಚಗಳು-12, ಚಟ್ನಿ ಪ್ಲೇಟು-6, ಊಟದ ಬಟ್ಟಲು, ಹಾಲು ಗಾಳಿಸಲು ಗಾಳೆ, ಹಾಲು ಬಿಸಿ ಮಾಡಲು ಪಾತ್ರೆ, ಬಾಣಲೆ ದೊಡ್ಡದು-1, ಸಣ್ಣದು-1, ಡಬ್ಬಿಗಳು, ಭರಣಿಗಳು - ಉಪ್ಪು, ಮೊಸರು, ಉಪ್ಪಿನಕಾಯಿ ಹಾಕಲು, ಲಾಟ್ನಾಳೆ-1, ಲಾಟ್ಗೊಣಿ-1, ಮೊಸರು ಕಡೆಗೋಲು-1, ಇಡ್ಲಿ ಪೆಡಾವಣ-1, ಹಿಟ್ಟು ಗಾಳಿಸಲು ಗಾಳೆ, ತೂತು ಪಾತ್ರೆ, ಸೌಟು (ದೌಲೆಗಳು)-5, ಬಿಸಿ ನೀರು ಕಾಯಿಸಲು ತೋಪು-1, ಬೆಲ್ಲ ಅಕ್ಕಿ ಹಾಕಲು ಜಾರುಗಳು, ಕಡೆಯುವ ಕಲ್ಲು ಅಥವಾ ಮಿಕ್ಸರ್, ಹಾಸುಗೆಗಳು, ತಲೆದಿಂಬು, ಕಪಾಟುಗಳು.

ಮನೆಯನ್ನೂ ದಿನಾಲೂ ಗುಡಿಸಿ ಒರಸಿ ಸ್ವಚ್ಛವಾಗಿಡಬೇಕು. ಹಿತ್ತಲು ಮನೆಯನ್ನು ಅತೀ ಸ್ವಚ್ಛವಾಗಿ ಚಂದವಾಗಿ ಇರಿಸಬೇಕು. ಶುದ್ಧ ಮಾತು, ಶುದ್ಧ ನಡತೆ, ಶುದ್ಧ ಮನಸ್ಸು, ಶುದ್ಧ ಭಕ್ತಿ, ಶುದ್ಧ ವಾತಾವರಣ ಇವುಗಳೆಲ್ಲಾ ದೇವರು ಪ್ರೀತಿ, ದಯೆ ತೋರಿಸುವ ಮಾರ್ಗ. ಇದಕ್ಕಾಗಿ ನಾವು ಪ್ರಯತ್ನ ಮಾಡಿ ಜೀವನದಲ್ಲಿ ಸುಖಶಾಂತಿ ಪಡೆಯೋಣ.

# ಹಬ್ಬಗಳು

ಹಬ್ಬಗಳನ್ನು ಆಚರಿಸುವುದರಿಂದ ಜೀವನದಲ್ಲಿ ಸುಖ, ಶಾಂತಿ ಮತ್ತು ನೆಮ್ಮದಿ ಸಿಗುತ್ತದೆ. ಕುಟುಂಬದ ಬಂಧು ಭಾಂದವರೊಡಗೂಡಿ ಈ ಹಬ್ಬಗಳನ್ನು ಆಚರಿಸುವುದರಿಂದ ವೈಯಕ್ತಿಕವಾದ ದ್ವೇಷ, ಅಸೂಯೆಗಳನ್ನು ಮರೆತು ಪ್ರೀತಿ ಪ್ರೇಮದಿಂದ ಒಂದೆಡೆ ಸೇರಲು ಅವಕಾಶವಾಗುತ್ತದೆ. ಮಾನವರಾದ ನಾವು ಪ್ರತೀ ವರ್ಷ ಆಚರಿಸುವ ಹಬ್ಬಗಳಲ್ಲಿ ಮೊದಲನೆಯದು ಯುಗಾದಿ.

## ಯುಗಾದಿ

"ಯುಗ" ಅಂದರೆ ವರ್ಷ, "ಆದಿ" ಎಂದರೆ ಪ್ರಾರಂಭ. ಪ್ರತೀ ಸಂವತ್ಸರದ ಮೊದಲನೇ ದಿನಕ್ಕೆ "ಯುಗಾದಿ" ಎನ್ನುತ್ತೇವೆ. ಈ ದಿನದಿಂದ ಚೈತ್ರ ವೈಶಾಖ ವಸಂತ ಋತು ಪ್ರಾರಂಭ. ಇದನ್ನು 'ವಸಂತ' ಮಾಸವೆಂದೂ ಹೇಳುತ್ತೇವೆ. ಹೆಚ್ಚಾಗಿ ಈ ದಿವಸ 'ಕಾಪ್ಪಡ ವಾಡಪ' ಮಾಡುತ್ತಾರೆ. ಅಂದರೆ ದೈವಾಧೀನರಾದ ಕುಟುಂಬದ ಮುತ್ತೈದೆಯರಿಗೆ ತಾವು ಉಡಲು ತಂದ ಎರಡು ಸೀರೆಗಳನ್ನು ಹಿರಿಯರಿಗೆ ಬಡಿಸುವುದು. (ಕೆಲವರು ಇದನ್ನು ಶ್ರಾವಣ ಮಾಸದ ನೂಲಹುಣ್ಣಿಮೆಯ ದಿನವೂ ಮಾಡುತ್ತಾರೆ.)

**ಮಾಡುವ ಕ್ರಮ :** ಮಣೆಯನ್ನು ತೊಳೆದು ರಂಗವಲ್ಲಿ ಬರೆದು ಸೆರಗು ಮೇಲೆ ಬರುವಂತೆ ಸೀರೆಗಳನ್ನು ಮಡಚಿ ಇಡುವುದು. (ರವಕೆ ವಸ್ತ್ರವನ್ನೂ ಇಡಬಹುದು. ಸೀರೆ ಮೇಲೆ ಕಾಗದ ಅಥವಾ ಬಾಳೆಎಲೆ ತುಂಡು ಇಟ್ಟು ಅದರಲ್ಲಿ ಕುಂಕುಮ ಕರಡಿಗೆ, ಕಾಡಿಗೆ ಕರಡಿಗೆ, ಹೂತುಂಡು, ಅಕ್ಷತೆ, ವೀಳ್ಯದ ಪಟ್ಟಿ-1 ಇಡಬೇಕು. ದೀಪ ಮಣೆಯ ಬಲಗಡೆ ಇಡಬೇಕು. ಬಾಳೆಎಲೆಯಲ್ಲಿ ಮಾಡಿದ ಅಡಿಗೆಯನ್ನು (ಪಾಯಸ, ಕಡಬು, ಬೆಳ್ತಿಗೆ ಅನ್ನ, ತುಪ್ಪ, ಮಜ್ಜಿಗೆ) ಬಡಿಸಬೇಕು. ಭಕ್ತಿಯಿಂದ ಹಿರಿಯರನ್ನು ಸ್ಮರಿಸಿ ಮನೆಯ ಯಜಮಾನರು 5 ಸರ್ತಿ ಆರತಿ ಮಾಡಿ ಕೆಳಗಿಟ್ಟು ಅಕ್ಷತೆಯನ್ನು ಮಣೆಯಲ್ಲಿ ಹಾಕಿ ತಿರುಗಿ ಆರತಿ ಮಾಡಿ ಪ್ರದಕ್ಷಿಣೆ ಬಂದು ಎಲ್ಲರೂ ನಮಸ್ಕರಿಸುವುದು. ಮಣೆಯನ್ನು ಸ್ವಲ್ಪ ಅಲ್ಲಾಡಿಸುವುದು. (ವಿಸರ್ಜಿಸುವುದು ಎಂದು ಅರ್ಥ)

**ಹಬ್ಬದ ಪದಾರ್ಥಗಳು :** ಕಡ್ಲೆ ಗಶಿ, ಬಿಬ್ಯಾ (ಗೇರುಬೀಜ) ಉಪ್ಕರಿ, ಕಡ್ಗೆಚಾಕ್ಕೊ ಅಥವಾ ಅಂಬ್ಯಾ ಉಪ್ಕರಿ (ಮಾವಿನ ಹಣ್ಣು) ದಾಳಿತೋಯ, ಗೋಡಿ ರಾಂದಯಿ, ಪೋಡಿಗಳು (ಬಾಳೆ, ನೇಂದ್ರಬಾಳೆ, ಗೆಣಸು) ರಸವೊಡೆ, ಮಡ್ಗಣೆ.

**ಊಟ :** ಊಟದ ಮೊದಲು ಕಾಗೆಗೆ ವ್ಯಾಸು ಮತ್ತು ದನಕ್ಕೆ ಗೋಗ್ರಾಸು ಇಡಬೇಕು.

**ವ್ಯಾಸು :** ಅಂದರೆ ಸಣ್ಣ ಬಾಳೆ ತುಂಡಿನ ಎಲೆಯ ಮೇಲೆ ಬೆಳ್ತಿಗೆ ಅನ್ನ ಪಾಯಸ, ತುಪ್ಪ ಹಾಕಿ ಕೃಷ್ಣಾರ್ಪಣ ಎಂದು ಹೇಳಿ ಅಂಗಳದಲ್ಲಿ ಇರುವ ಕಾಗೆಗಳಿಗೆ ಇಡುವುದು.

**ಗೋಗ್ರಾಸು :** ಅಂದರೆ ಸಣ್ಣ ಬಾಳೆಎಲೆಯ ತುಂಡಿನ ಮೇಲೆ ಬೆಳ್ತಿಗೆ ಅನ್ನ ಪಾಯಸ ಹಾಕಿ ದನಕ್ಕೆ ಕೊಡುವುದು (ತುಪ್ಪ ಹಾಕಲಿಕ್ಕಿಲ್ಲ). ಊಟದ ಮೊದಲು ಹೊಸ ಪಂಚಾಂಗ ಓದಿ 'ಕೊಡುಖಾಪ್ಪೆ' (ಬೇವು ಬೆಲ್ಲವನ್ನು ಬೆರಸಿ ತಿನ್ನಬೇಕು) ಜೀವನದಲ್ಲಿ ಬರುವ ಕಷ್ಟ ಸುಖಗಳೆರಡನ್ನೂ ಸಮಾನ ರೀತಿಯಲ್ಲಿ ಅನುಭವಿಸಬೇಕೆಂಬ ತತ್ವವನ್ನು ಈ ಸಂಪ್ರದಾಯ ಸಾರುತ್ತದೆ. ಯಜಮಾನನು ಊಟಕ್ಕೆ ಕೂತು ತನ್ನ ಬಲತೊಡೆಯ ಮೇಲೆ ಸೀರೆಗಳನ್ನು ಇಟ್ಟು ಪತ್ನಿಗೆ ಕೊಡುವುದು. ಪತ್ನಿಯೂ ಹೂ ಕುಂಕುಮ, ಕಾಡಿಗೆ ಇತರ ಹೆಣ್ಣುಮಕ್ಕಳಿಗೂ ಕೊಟ್ಟು ಸೀರೆಯ ಒಂದು ನೂಲು ದೇವರಿಗೂ, ಸಣ್ಣ ತುಂಡು ದೀಪಕ್ಕೆ ಹಚ್ಚಿ ತುಳಸಿ ಮಾತೆಗೂ ಅರ್ಪಿಸಿ ಉಡುವ ವಾಡಿಕೆ. ಸಂಜೆ ದೇವಸ್ಥಾನಕ್ಕೆ ಹೋಗಿ ದೇವರಿಗೆ ನಮಸ್ಕರಿಸಿ ಬರುವುದು.

ಯುಗಾದಿಯ ದಿನದಿಂದ ವೈಶಾಖ ವಸಂತ ಮಾಸ ಶುರು ಆಗುತ್ತದೆ. ದೇವಸ್ಥಾನಗಳಲ್ಲಿ 'ವಸಂತ ಪೂಜೆ' ಅಥವಾ ಪನ್ಸಾರ ಪೂಜೆ ಮಾಡುತ್ತಾರೆ. ದೇವರಿಗೆ ಹೊಸ ವರ್ಷದ ಫಲವಸ್ತುಗಳನ್ನು ಮಾವು, ಹಲಸು, ಗೇರುಬೀಜ, ಕಡ್ಲೆ ಉಪ್ಕರಿ, ಮುಗಾದಾಳಿ, ಪಾನಕ, ನೈವೇದ್ಯ ಮಾಡಿ ಭಕ್ತಾದಿಗಳಿಗೆ ಹಂಚುತ್ತಾರೆ. 'ಪಾನಕ ಪೂಜೆ' ಎಂದೂ ಕರೆಯುತ್ತಾರೆ. ಕೆಲವರು ಈ ಪೂಜೆಯನ್ನು ಮನೆಯಲ್ಲಿಯೂ ಮಾಡುತ್ತಾರೆ.

## ಆಷಾಡ ಏಕಾದಶಿ (ಭೀಮನ ಉಪವಾಸ)

ಈ ದಿನ ಬೆಳಿಗ್ಗೆ ಎದ್ದು ತಲೆಸ್ನಾನ ಮಾಡಿ ತೀರ್ಥ ತೆಗೆದುಕೊಳ್ಳುವುದು. ಮುಖ್ಯ (ಒಂದೇ ಸಾರಿ ಪ್ರಾಸಿಸುವುದು) ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ದೇವರಿಗೆ ವಂದಿಸುವುದು.

**ತಯಾರಿ :** ಹಿಂದಿನ ರಾತ್ರಿ ಅಡಿಗೆ ಮನೆಯನ್ನು ಗೋಮೇಯದಿಂದ ಸಾರಿಸಿ ಶುಚಿಗೊಳಿಸಬೇಕು. ಆಡ್ಗೊಳಿ, ಕಾಂತಣೆ, ಕೊಯ್ತಿ ಮಣೆಗಳನ್ನು ತೊಳೆದು ಇಡಬೇಕು. ಬೆಳಿಗ್ಗೆ ಸ್ನಾನದ ನಂತರ ತುಳಸಿಗೆ ನೀರು ಹಾಕಿ ಭಕ್ತಿಯಿಂದ ಪೂಜಿಸಿ ಮನೆದೇವರನ್ನು ತೊಳೆದು ದೀಪ ಬೆಳಗಿಸಿ ನಮಸ್ಕರಿಸಿ ಫಲಾಹಾರಕ್ಕೆ ತಯಾರು ಮಾಡುವುದು.

**ಫಲಾಹಾರ :** ಅನುಕೂಲವಿದ್ದ ಫಲಾಹಾರ. ಕಂದಮೂಲ ತಿಂದರೆ ಉತ್ತಮ. (ಅಕ್ಕಿ, ಪದಾರ್ಥ, ನೀರುಳ್ಳಿ, ಬೆಳ್ಳುಳ್ಳಿ, ನಿಷೇಧ) ರುಲಾಂ (ಸಜ್ಜಿಗೆ) ಇಡ್ಲಿ ಅಥವಾ ಖೊಟ್ಟೊ ಚಟ್ನಿ, ಧಂಯಾ ಪೋವು (ಮೊಸರು ಅವಲಕ್ಕಿ) ಗಜಬಜೆ, ಕುಂವೆಪಿಟ್ಟಾ ಖಿಡಿ. ಜಾಗರಣೆ ಮಾಡಿದರೆ ಉತ್ತಮ, ಜಪವನ್ನೂ ಮಾಡಬಹುದು.

ಮರುದಿನ ಮುಗಾದಾಳಿ, ಏಕಪಾನ್ನಿ ಚಟ್ನಿ ಮಾಡಿ ಕಾಗೆಗೆ ವ್ಯಾಸು ಇಟ್ಟು ಊಟ ಮಾಡಬೇಕು.

## ನಾಗರ ಪಂಚಮಿ

ಶ್ರಾವಣಮಾಸದ ಶುಕ್ಲ ಪಕ್ಷದ ಪಂಚಮಿ ತಿಥಿಯೇ ನಾಗಾರಾಧನೆಯ ನಾಗರಪಂಚಮಿಯ ದಿನ. ಮಳೆಗಾಲದಲ್ಲಿ ಮಳೆನೀರು ಬಿಲಗಳಲ್ಲಿ ತುಂಬುವುದರಿಂದ, ಹಾವುಗಳು ಬಿಲಗಳಿಂದ ಭೂಮಿಯ ಮೇಲಕ್ಕೆ ಬರುತ್ತವೆ. ಮಾನಸಿಕ ಧೈರ್ಯವನ್ನು ತಂದುಕೊಳ್ಳಲು ನಾಗಗಳನ್ನು ಪೂಜಿಸಲು ಪ್ರಾರಂಭಿಸಿದರು. ಹಬ್ಬದ ವಿಶೇಷ ನಾಗನನ್ನು ತಂಪು ಮಾಡುವುದು.



**ತಯಾರಿ :** ಅಭಿಷೇಕಕ್ಕೆ ದನದ ಹಾಲು, ಸಿಯಾಳ, ಪಂಚಾಮೃತ, (ಹಾಲು, ಜೇನು, ತುಪ್ಪ, ಸಕ್ಕರೆ, ಮೊಸರು) ಹಳದಿ ನೀರು, ಹೊದ್ಲು, ಪರಿಮಳಯುಕ್ತ ಹೂ ಸಿಂಗಾರ, ಜನಿವಾರ, ಕರ್ಪೂರ, ತುಳಸಿದಳ, ಹಣ್ಣುಕಾಯಿ, ಎಲ್ಲವನ್ನೂ ಹರಿವಾಣದಲ್ಲಿ ಇಟ್ಟು ನಾಗಕಟ್ಟೆ ಇದ್ದಲ್ಲಿ ಪೂಜಿಸುತ್ತಾರೆ. ನಾಗನನ್ನು ಬ್ರಾಹ್ಮಣ ರೂಪದಲ್ಲಿ ಪೂಜಿಸುವ ವಾಡಿಕೆ.

**ವಿಧಾನ :** ನಾವು ಆ ದಿನ ಬಿಸಿ ನೀರು ಸ್ನಾನ ಮಾಡಬಾರದು. ಮೆಣಸಿನ ಒಗ್ಗರಣೆ ಪದಾರ್ಥ ಮಾಡಬಾರದು. ಮೆಣಸನ್ನು ಹಿಂದಿನ ದಿನವೇ ಹುರಿದು ಇಡಬೇಕು. ಪತ್ರಡೊ, ಘಶಿ, ಸೂರ್ನ ಅಥವಾ ಬೀನ್ಸ್ ಬಟಾಟೆ ಸುಕ್ಕೆ, ಹಳದಿ ಎಲೆಯ ಪತ್ತೊಳಿ, ಖೊಟ್ಟೊ, ಹಳದಿ ಎಲೆ ಹಾಕಿ ಚೆಪ್ಪೆಖಿರಿ, ಬೆಳ್ತಿಗೆ ಅನ್ನದ ಊಟ, ಊಟಕ್ಕೆ ಮೊದಲು ಕಾಗೆಗೆ ವ್ಯಾಸ, ದನಕ್ಕೆ ಗೋಗ್ರಾಸು ಇಡಬೇಕು. ಆದಿನ ಚಿಕ್ಕ ಮಕ್ಕಳಿಗೆ ಸ್ನಾನ ಇಲ್ಲ.

## ಶ್ರಾವಣ ಮಾಸದ ಚೂಡಿ ಪೂಜೆ

ಶ್ರಾವಣ ಮಾಸದ ರವಿವಾರ ಮತ್ತು ಶುಕ್ರವಾರ ಪೂಜಿಸುವ ಕ್ರಮ ಇದೆ.

**ತಯಾರಿ :** ಮುಂಚಿನ ದಿನವೇ ದಿಬ್ರಾಂಕುರು (ಗರಿಕೆ ಹುಲ್ಲು) ಅನ್ವಾಳಿ, ಮಿಠಾಯಿ ಹೂ, ರತ್ನಗಂಧಿ (ಕೆಂಪು ಹಳದಿ), ನೇರಳೆ ಬಣ್ಣದ ಹೂ, ಇತರ ಹೂಗಳನ್ನು ಇಟ್ಟು ಚೂಡಿ ಕಟ್ಟಬೇಕು. ಗರಿಕೆ ಹುಲ್ಲು 5ರ ಪ್ರಕಾರ ಪ್ರತೀ ಚೂಡಿಯಲ್ಲಿ ಇಡಬೇಕು.

**ತಯಾರಿ :** ನೈವೇದ್ಯಕ್ಕೆ ಅವಲಕ್ಕಿ ಕಜ್ಜಾಯ, ಹೊದ್ಲು ಕಜ್ಜಾಯ, ಹಣ್ಣುಕಾಯಿ, ದನದ ಹಾಲು, ಶೀರಾ ಯಾವುದಾದರೂ ಒಂದು ಮಾಡಬಹುದು. ಕುಂಕುಮ, ಗಂಧ, ಅರಸಿನ, ಒಂದು ಚಮಚ ಶುದ್ಧ ನೀರು, ಅಗರಬತ್ತಿ, ಆರತಿ, ಚೂಡಿಗಳು ಹರಿವಾಣದಲ್ಲಿ ಇಡುವುದು. ದೀಪ, ಬೆಂಕಿಪೆಟ್ಟಿಗೆ, ವೀಳ್ಯದ ಪಟ್ಟಿ ಎಲ್ಲವನ್ನು ತಯಾರು ಮಾಡುವುದು.

**ಕ್ರಮ :** ಮೊದಲು ದೀಪ ಹಚ್ಚಿ ಕಲಶದ ಸುತ್ತಲೂ ಕುಂಕುಮ, ಗಂಧವನ್ನು ನಾಲ್ಕು ಕಡೆ ಮುಟ್ಟಿಸಿ, ಸ್ವಲ್ಪ ಕುಂಕುಮ, ಗಂಧ, ಅಕ್ಷತೆಯನ್ನು ಕಲಶದಲ್ಲಿ ಹಾಕಿ ತುಳಸಿಗೆ ಐದು ಸಾರಿ



ನೀರು ಹಾಕಿ ಶ್ರೀಮಾತೆಗೆ ಹೂ ಕುಂಕುಮ, ಗಂಧ ಅರ್ಪಿಸಿ ಇತರರಿಗೂ ಕೊಟ್ಟು ಒಂದು ತುಳಸಿದಳ ನೈವೇದ್ಯ ಪಾತ್ರೆಯಲ್ಲಿ ಹಾಕಿ ನೈವೇದ್ಯ ಸಮರ್ಪಿಸುವುದು. ನಂತರ ಕೈಯಲ್ಲಿ ಅಕ್ಷತೆ ಹಿಡಿದು ಪ್ರತೀ ಸುತ್ತಿಗೆ ಅಕ್ಷತೆಯನ್ನು ತುಳಸಿಗೂ, ಸೂರ್ಯದೇವರಿಗೂ ಮೇಲೆ ಹಾಕಿ ಐದು ಪ್ರದಕ್ಷಿಣೆ ಬಂದು ಭಕ್ತಿಯಿಂದ ನಮಸ್ಕರಿಸಿ ಆರತಿ ಬೆಳಗಿಸಿ ತುಳಸೀ ತೀರ್ಥ ತೆಗೆದುಕೊಂಡು ಮನೆಯ ಮಾಡಿನ ಮೇಲೆ ಒಂದು ಚೂಡಿಯನ್ನು ಅಗಲಿದ ಹಿರಿಯ ಮುತ್ತೈದೆಯರಿಗೆ ಅರ್ಪಿಸಬೇಕು. ನಂತರ ಹರಿವಾಣ ಹಿಡಿದು ಬಂದು ಮನೆಯ ದ್ವಾರದ ಪೂಜೆ. ಎರಡೂ ಬದಿಗಳಲ್ಲಿ ಕುಂಕುಮ ಚೂಡಿ ಇಟ್ಟು ಆರತಿ ಮಾಡಿ ಅಕ್ಷತೆ ಹಾಕಿ ನಮಸ್ಕರಿಸಿ ಒಳಗೆ ದೇವರ ಕೋಣೆಗೆ ಬಂದು ದೇವರಿಗೂ ಹೂ, ಕುಂಕುಮ ಚೂಡಿ ಅರ್ಪಿಸಿ ತಾನೂ ಸ್ವೀಕರಿಸಿ ಇತರರಿಗೂ ನೈವೇದ್ಯ ಕೊಟ್ಟು, ಚೂಡಿ ಕೊಟ್ಟು ನಮಸ್ಕರಿಸಿ ಆಶೀರ್ವಾದ ಪಡೆಯುವುದು. ಈ ಪೂಜೆಯ ವೈಶಿಷ್ಟ. ಈ ಪೂಜೆಯನ್ನು ಮಧ್ಯಾಹ್ನ 12 ಗಂಟೆಯೊಳಗೆ ಮಾಡಿದರೆ ಉತ್ತಮ. ಪೂಜಿಸಿದ ಚೂಡಿಯನ್ನು ಅಂಚೆ ಮೂಲಕ ಹಿರಿಯರಿಗೆ ಕಳುಹಿಸುವುದು.

## ಋುಗುಪಾಕರ್ಮ (ನೂಲಹುಣ್ಣಿಮೆ)

"ಋುಗುಪಾಕರ್ಮ" ಇದು ಮುಖ್ಯವಾಗಿ ಪುರುಷರಿಗೆ ಸಂಬಂಧ ಪಟ್ಟಿದ್ದು. ಉತ್ತರ ಹಿಂದೂಸ್ಥಾನದಲ್ಲಿ ಇದನ್ನು ರಕ್ಷಾಬಂಧನ ಎಂದೂ ಕರೆಯುತ್ತಾರೆ. ನಾಗರ ಪಂಚಮಿಯಾದ ಕೆಲವು ದಿವಸಗಳಲ್ಲಿ 'ಶ್ರವಣ' ನಕ್ಷತ್ರ ಬಂದ ದಿನ ಜನಿವಾರ ಪೂಜಿಸಿ ಧರಿಸಿಕೊಳ್ಳುವುದು. ಪ್ರತಿ ಒಬ್ಬ ಗ್ರಹಸ್ಥನು ತನ್ನ ಉಪನಯನವಾದ ಗಂಡು ಮಕ್ಕಳೊಡನೆ ದೇವಸ್ಥಾನ ಅಥವಾ ಪುರೋಹಿತರಲ್ಲಿ ಹೋಗಿ ಯಜ್ಞಹೋಮ, ಗಾಯತ್ರಿ ಜಪಮಾಡಿ ಹಣ್ಣುಕಾಯಿ ಹೂ ದೇವರಿಗೆ ಅರ್ಪಿಸಿ, ಪುರೋಹಿತರಿಗೆ ದಕ್ಷಿಣೆ ಕೊಟ್ಟು, ಪುರೋಹಿತರಿಂದ ಜನಿವಾರ ಧರಿಸಿ ಆಶೀರ್ವಾದ ಪಡೆಯಬೇಕು. ಗ್ರಹಸ್ಥನು ದಿನಾಲೂ ಗಾಯತ್ರಿ ಜಪಮಾಡಿ ದೇವರನ್ನು ಪೂಜಿಸುವುದು ಮುಖ್ಯ ಕರ್ತವ್ಯ. ಸ್ತ್ರೀಯರೂ ನಿತ್ಯವೂ ತುಳಸೀ ಮಾತೆಯನ್ನು ಪೂಜಿಸಿ ದ್ವಾರಪೂಜೆ ಮಾಡಿ ದೇವರನ್ನು ವಂದಿಸಿ ಪತಿ, ಮಕ್ಕಳ ಅಭಿವೃದ್ಧಿಗಾಗಿ ಪ್ರಾರ್ಥಿಸಿ ಶಾಂತಿ ತೃಪ್ತಿಯಿಂದ ಇರಬೇಕು. ಮನೆಗೆ ಬಂದು ಪೂಜಿಸಿದ ಜನಿವಾರ ಹಿರಿಯರಿಂದ ಹಾಕಿಸಿ ನಮಸ್ಕರಿಸಿ ಆಶೀರ್ವಾದ ಪಡೆಯಬೇಕು. ಚಿಕ್ಕ ಹೆಣ್ಣುಮಕ್ಕಳಿಗೂ ಪೂಜಿಸಿದ ಜನಿವಾರ ಪ್ರೀತಿ ವಾತ್ಸಲ್ಯದಿಂದ ಹಾಕಿ ಆಶೀರ್ವದಿಸಬೇಕು. ಈ ಕ್ರಮದಿಂದ ಮಕ್ಕಳಲ್ಲಿ ಭಕ್ತಿ ಪ್ರೀತಿಯ ಸಂಸ್ಕಾರ ಬೆಳೆದು ಮುಂದೆ ತಮ್ಮ ಮಕ್ಕಳಿಗೂ ಹಾಗೆಯೇ ಮಾಡುತ್ತಾರೆ. ಪರಊರಿನಲ್ಲಿ ಇರುವ ಹಿರಿಯರಿಗೂ, ಕಿರಿಯರಿಗೂ ಜನಿವಾರ ಅಂಚೆ ಮೂಲಕ ಕಳುಹಿಸುವ ವಾಡಿಕೆ ಇದೆ. ಈ ದಿನ ಹೆಚ್ಚಾಗಿ ಹೊಸ ವಸ್ತ್ರ ಧರಿಸುತ್ತಾರೆ. "ಕಾಪ್ಪಡ ವಾಡಪ" ಮಾಡುವವರು ಈ ದಿನವೂ ಮಾಡಬಹುದು.

**ಪದಾರ್ಥ :** ಕಡ್ಲೆಗಶಿ, ದಾಳಿತೋಯ, ಸುಕ್ಕೆ, ಖೊಟ್ಟೊ, ಜೀವಿಕಡ್ಗಿ, ಮಾಡ್ನಿ, ಸುರ್ನ, ಗೆಣಸು, ನೇಂದ್ರ ಬಾಳೆ ಹಣ್ಣುಗಳ ಪೋಡಿ, ಪತ್ರೊಡೊ, ಪೊವಾಂಖಿರಿ, ಪಾತ್ತೊಳಿ ಮಾಡುತ್ತಾರೆ. ವ್ಯಾಸು, ಗೋಗ್ರಾಸು ಇಟ್ಟು ಭೋಜನ ಮಾಡಬೇಕು. ಹೊಸ ಹಬ್ಬದಂದು ಅಳಿಯ, ಮಗಳಿಗೆ ಭರ್ಜರಿಯಾಗಿ ಬಡಿಸಿ, ಊಟದ ನಂತರ ಇಬ್ಬರಿಗೂ ಉಡುಗೊರೆ ಮಾಡುವುದು. "ದರ್ಯಾದೂದ" ಸಮುದ್ರಪೂಜೆ ಮಾಡಿ, ದೇವಸ್ಥಾನದ ಲಕ್ಷ ಹೂವಿನ ಪೂಜೆ ಮಾಡುತ್ತಾರೆ.

## ಕೃಷ್ಣಾಷ್ಟಮಿ

ಈ ಹಬ್ಬವು ನೂಲಹುಣ್ಣಿಮೆಯ 8,10 ದಿನಗಳ ನಂತರ ಬರುತ್ತದೆ. ಕೃಷ್ಣಪಕ್ಷದ ಅಷ್ಟಮಿಯ ದಿನ ರೋಹಿಣಿ ನಕ್ಷತ್ರದ ಜಯಂತೀ ಯೋಗವಿದ್ದ ದಿನವೇ ಕೃಷ್ಣ ಜಯಂತಿ ಈ ಹಬ್ಬವನ್ನು ಹೆಚ್ಚಾಗಿ ಪ್ರತೀ ಹಿಂದೂ ಮನೆಗಳಲ್ಲಿ ಆಚರಿಸುತ್ತಾರೆ. ವೃದ್ಧರಿಂದ ಮಕ್ಕಳವರೆಗೆ ಈ ಹಬ್ಬವನ್ನು ಖುಶಿಯಿಂದ ಆಚರಿಸುತ್ತಾರೆ. ಹಬ್ಬದ ಮುಂಚಿನ ದಿನ ಅಂದರೆ ಸಪ್ತಮಿಯ ದಿನ 'ತಾಂದ್ಲಾ ಬಾಕ್ರಿ' (ಅಕ್ಕಿ ರೊಟ್ಟಿ), ಪತ್ರೊಡೆ ಮಾಡುವ ವಾಡಿಕೆ. ಜನ್ಮಾಷ್ಟಮಿಯ ಮೊದಲು ಇಡೀ ಮನೆಯನ್ನು ಗುಡಿಸಿ ಸ್ವಚ್ಛ ಮಾಡಬೇಕು. ಈ ದಿನ ಹೆಸ್ರು ನೆನಸಿ ಮರುದಿನ ಮುಚ್ಚಿ ಇಟ್ಟು ಮೊಳಕೆ ಬರಿಸಿ ಅಷ್ಟಮಿಯ ಮರುದಿನ ಮುಗಾಂಗಶಿ, ಏಕಪಾನ್ನಿ ಚಟ್ನಿ ಮಾಡುವ ಕ್ರಮ.

**ಅಷ್ಟಮಿಯ ದಿನ :** ತಲೆ ಸ್ನಾನ ಮಾಡಿ, ತುಳಸಿಗೆ ನೀರು ಹಾಕಿ ಪೂಜಿಸಿ, ತೀರ್ಥ ತೆಗೆದುಕೊಂಡು ಮನೆದೇವರ ಮೂರ್ತಿಗಳನ್ನು ಶುದ್ಧ ನೀರಿನಿಂದ ತೊಳೆದು ದೀಪ ಬೆಳಗಿಸಿ ಕುಂಕುಮ ಇಟ್ಟು ನೈವೇದ್ಯಕ್ಕೆ ಹಾಲು ಸಕ್ಕರೆ. ತೀರ್ಥವನ್ನು ಒಂದೇ ಸಾರಿ ತೆಗೆದುಕೊಳ್ಳುವುದು. (ಏಕಾದಶಿಯ ಹಾಗೆ) ನಂತರ ಫಲಾಹಾರ.

**ಪೂಜೆಗೆ ಮಾಡಬೇಕಾದ ತಯಾರಿ :** ನೈವೇದ್ಯಕ್ಕೆ ಎಳ್ಳುಂಡೆ, ಪಂಚಕಜ್ಜಾಯ, ಸಕ್ಕರೆ-ರೊಟ್ಟಿ, ಕಡ್ಲೆ ಉಪ್ಕರಿ, ಹೆಸ್ರು ಬೇಳೆ ಉಸ್ಲಿ, ಧಂಯಾ ಪೋವು, ಆಲ್ಲೆ, ಆಳ್ವತಿ.

**ಪೂಜೆಗೆ :** ತುಳಸಿ, ಕೇದಗೆ ಹೂ, ಪಾರಿಜಾತ ಹೂ, ಮಲ್ಲಿಗೆ ಹೂ, ಪಂಚಾಮೃತ, ಅರ್ಘ್ಯ ಕೊಡಲು ಹಾಲು, ಹಣ್ಣುಕಾಯಿ, ಫಲವಸ್ತು ನಿರೀಕ್ಷಣೆ ಸಾಮಾನು (ಕಲ್ಲುಸಕ್ಕರೆ, ಗೇರುಬೀಜ, ಬದಾಮು, ಖರ್ಜೂರ, ದ್ರಾಕ್ಷೆ) ಕರ್ಪೂರ, ಅಗರಬತ್ತಿ, ಆರತಿಗಳು. ಕೃಷ್ಣನ ಮೂರ್ತಿಯನ್ನು ತಾವರೆ ಎಲೆ ಮೇಲೆ ಮಂಟಪ ಮಾಡಿ ಕುಳ್ಳಿರಿಸಿ ಹೂಗಳಿಂದ ಶೃಂಗರಿಸಿ ಪೂಜೆಯನ್ನು ಸಾಯಂಕಾಲದಲ್ಲಿ ಪ್ರಾರಂಭಿಸಬೇಕು. ಶ್ರೀ ಕೃಷ್ಣನನ್ನು ಪ್ರತಿಷ್ಠೆ ಮಾಡಿ (ಮೊದಲು ಸ್ನಾನ ಮಾಡಬೇಕು) ಸಹಸ್ರನಾಮ (100 ಹೆಸರುಗಳನ್ನು) ಪಠನ ಮಾಡಬೇಕು. ಉಪನಯನವಾದ ಮಕ್ಕಳು ತಮ್ಮ ಹಿರಿಯರೊಡನೆ ಅಷ್ಟೋತ್ತರ ಹೇಳಿ ಒಂದು ಹೆಸರಿಗೆ ಒಂದು ತುಳಸಿದಳ ಅರ್ಪಿಸಬೇಕು. ಪೂಜೆಗೆ ಕೇದಗೆ ಹೂ ಅಗತ್ಯ. ಪೂಜೆಯ ನಂತರ ಉಪವಾಸವಿದ್ದವರು ಕೇದಗೆ ಹೂವಿನಲ್ಲಿ ಸ್ವಲ್ಪ ಹಾಲು ಹಾಕಿ ದೇವಕಿ ಮತ್ತು ರೋಹಿಣಿಯ (ಅಂದರೆ ಕೃಷ್ಣ

ಬಲರಾಮರ ತಾಯಂದಿರು) ಹೆಸರಲ್ಲಿ ಎರಡು ಸಾರಿ ಅರ್ಘ್ಯ ಕೊಡುವುದು. ಮರುದಿನ ರೋಹಿಣಿ ನಕ್ಷತ್ರ ಇರುವವರೆಗೆ 'ಹರಿವಾಸ' ಎನ್ನುತ್ತಾರೆ. ಅದರ ನಂತರ ದ್ವಾದಶಿ. ಕಾಗೆಗೆ ವ್ಯಾಸ ಇಟ್ಟು ಮುಗಾಂಗಶಿ, ಏಕ್ಪಾನಿ ಚಟ್ನಿ, ಇತರ ಪಲ್ಯಗಳು ಮಾಡಬೇಕು. ಈ ಹಬ್ಬವಾದ ಹನ್ನೆರಡು ದಿನಗಳ ನಂತರ ಚೌತಿಹಬ್ಬ.

## ಗಣೇಶಪೂಜೆ ಅಥವಾ ಚೌತಿಹಬ್ಬ

ಆ ಹಬ್ಬವನ್ನು ದೇಶಾದ್ಯಂತ ಆಚರಿಸುತ್ತಾರೆ. ಜಾತಿ, ಮತ, ಭೇದವಿಲ್ಲದೆ ಶ್ರೀಗಣೇಶನನ್ನು ವೈಭವದಿಂದ 5 ದಿನಗಳವರೆಗೆ ಪೂಜಿಸುತ್ತಾರೆ. ಕೆಲವರು ಒಂದೇ ದಿನ ಪೂಜಿಸುತ್ತಾರೆ. ಗಣೇಶನ ಪೂಜೆಯ ಮೊದಲ ದಿನ 'ಗೌರಿ ಪೂಜೆ' ಗೌರಿ ತೃತೀಯ' ಅನ್ನುತ್ತಾರೆ. ಈ ಪೂಜೆಗೆ ಮುಖ್ಯವಾಗಿ 'ವಾಯ್ನಪೂಜೆ' ಮಾಡುವ ಸಂಪ್ರದಾಯವಿದೆ. ಈ ವ್ರತಕ್ಕೆ ಮುಖ್ಯವಾಗಿ ಶೃಂಗರಿಸಿದ ತೆಂಗಿನಕಾಯಿ ಮತ್ತು ದಾರವನ್ನು ಧರಿಸುವುದು. (ವಾಯ್ನ ಸಿಂಗರಿಸುವ ವಿಧಾನವನ್ನು ಮದುವೆಯ ವಾಯ್ನ ಪೂಜೆಯಲ್ಲಿ ಬರೆದಿದೆ.) ಹಣತೆ ಬೆಳಗಿಸಿ ಪೂಜೆ ಮಾಡಿ ಮೊದಲು ಗೌರಿ ಮಾತೆಗೆ ಸಮರ್ಪಿಸಿ ಪುರೋಹಿತರಿಗೆ ಕೊಟ್ಟು, ನಂತರ ಹಿರಿಯರಿಗೆ ಕೊಡುವುದು. ಹಲವು ಬಗೆಯ ಭಕ್ಷ ಮಾಡಿ ತಾಯಿ ಮಗನಿಗೆ ಬಾಳೆ ಎಲೆಯಲ್ಲಿ ಬಡಿಸಿ (ಗೌರಿ ಮತ್ತು ಗಣೇಶನಿಗೆ) ಆರತಿ ಮಾಡಿ ನಂತರ ಆ ಎಲೆಗಳಲ್ಲಿ ಚಿಕ್ಕ ಮಕ್ಕಳನ್ನು ಊಟಕ್ಕೆ ಕೂಡಿಸುವುದು.

## ಗಣಹೋಮ ಶ್ರೀ ಗಣೇಶನ ಪೂಜೆ



ಭಾದ್ರಪದ ಶುಕ್ಲದ ಚೌತಿಯಂದು ಶ್ರೀ ಗಣೇಶ ವಿಗ್ರಹ ತಂದ ಬಳಿಕ "ಮೊದಲು ಗಣ ಹೋಮ" ಮಾಡುತ್ತಾರೆ. (ಕೆಲವು ಕಡೆ ಇರುವುದಿಲ್ಲ).

**ಇದ್ದರೆ ಮಾಡುವ ತಯಾರಿ :** ಅಲಂಕೃತ ದೀಪ-1, ಪುಣ್ಯಾ ವಾಚನಕ್ಕೆ ಚಂಬು-2, (ಸ್ಟೀಲ ಅಥವಾ ತಾಮ್ರದ) ತಟ್ಟೆ ಚಿಪ್ಪುಟ, ಹರಿವಾಣ, ಪುರೋಹಿತರಿಗೆ ಹರಿವಾಣ-1, ಇತರ ಹರಿವಾಣ-4, ಹಣ್ಣುಕಾಯಿ, ಮಣೆಗಳು-3, (ದಂಪತಿಗಳಿಗೆ-2 ಮಣೆಗಳು) ಕಲಶಕ್ಕೆ ಚಂಬು-1 (ದೊಡ್ಡದು), ಬೈರಾಸು-1, ಧೋತಿ-1, ಮಲ್ಲಿಗೆ, ಅಬ್ಬುಲೆ, ಸೇವಂತಿಗೆ, ಇತರ ಹೂಗಳು, ತುಳಸೀದಳ-2 ಮುಷ್ಟಿ, ದಿಬ್ರಂಕುರ (ಗರಿಕೆ ಹುಲ್ಲು)-2 ಮುಷ್ಟಿ ಮುಖ್ಯಬೇಕು. ದನದ ತುಪ್ಪ-2 ಕುಡ್ತೆ, ತೆಂಗಿನಕಾಯಿ-8, ವೀಳ್ಯದ ಪಟ್ಟಿ-10, ಬಾಳೆಎಲೆ-10, ದೇವಬಾಳೆ ಹಣ್ಣು-15, ಬೆಳ್ತಿಗೆ ಅಕ್ಕಿ-1 ಕೆ.ಜಿ., 3 ಅಗರಬತ್ತಿ, ಆರತಿ-1, ಮಾವಿನ ಎಲೆಯ ಕೊಡಿ-5, (ಅಂಬ್ಯಾ ತಾಳೊ), ಅಲಸಿನ ಕೆತ್ತೆ, ಹ್ಯೊಗೆ ಸೇರು-2, ಹಂಚು-2, ಗಣಹೋಮಕ್ಕೆ ಆರತಿ, ಮಧ್ಯಾಹ್ನ ಮಹಾಪೂಜೆಗೆ 5 ಆರತಿ, ದಶಾಂಗ, ಕರ್ಪೂರ ಚೌಕಾಕಾರದ ಕುಂಡದಲ್ಲಿಯೂ ಹೋಮ ಮಾಡಬಹುದು.

**ಗಣಹೋಮದ ಕಜ್ಜಾಯ ಮಾಡುವ ಕ್ರಮ :** ಜುಟ್ಟು ಸಮೇತ ಒಂದು ತೆಂಗಿನಕಾಯಿಯನ್ನು (ಅದರ ಸಿಪ್ಪೆ, ಗೆರಟ್ಟೆ, ಕರ್ಟೆ ಜುಟ್ಟು ಸಮೇತ) ಹೋಮಕ್ಕೆ ಹಾಕಬೇಕು. 8 ಗಂಟಿನ ಕಬ್ಬಿನ ಸಿಪ್ಪೆ, 8 ದೇವಬಾಳೆ ಹಣ್ಣಿನ ಸಿಪ್ಪೆ ಎಲ್ಲಾ ಹೋಮಕ್ಕೆ ಸಮರ್ಪಿಸಬೇಕು. ನಂತರ ಆ ತೆಂಗಿನ ಕಾಯಿ ಒಡೆದು ಆ ನೀರಿಗೆ ಸ್ವಲ್ಪ ಗೋಧಿಹಿಟ್ಟು, ತೆಂಗಿನ ತುರಿ, ಬೆಲ್ಲ ಸ್ವಲ್ಪ ಹೆಚ್ಚು ಹಾಕಿ ಅಪ್ಪ ಮಾಡಬೇಕು. ಆ ಇಡೀ ತೆಂಗಿನ ಕಾಯಿಯ ತುರಿ ಹಾಕಿ ಬೆಲ್ಲದ ಒಟ್ಟಿಗೆ ಬೆರೆಸಿ 8 ಮುಷ್ಠಿ ಅವಲಕ್ಕಿ, 8 ಮುಷ್ಠಿ ಹೊದ್ಲು (ಲಾಯಿ), 8 ಮುಷ್ಠಿ ಹುರಿದ ಎಳ್ಳು (ತೀಳು), 8 ದೇವಬಾಳೆ ಹಣ್ಣಿನ ಉರುಟು ತುಂಡುಗಳು, 8 ಕಬ್ಬು ತುಂಡುಗಳು, ಜೇನುತುಪ್ಪ, 8 ಅಪ್ಪ, ಇದನ್ನೆಲ್ಲಾ ಚೆನ್ನಾಗಿ ಬೆರಸಿ ಪಾತ್ರೆಯಲ್ಲಿ ಹಾಕಿಡಬೇಕು. ಈ ಕಜ್ಜಾಯವನ್ನು ಸಹಾ ಹೋಮದಲ್ಲಿ ಹಾಕಲಿಕ್ಕಿದೆ. ಈ ಗಣಹೋಮದ ಕಜ್ಜಾಯವನ್ನು ಭಕ್ತಿಯಿಂದ ಎಲ್ಲರಿಗೂ ಹಂಚಿ ನಾವೂ ಸ್ವೀಕರಿಸಬೇಕು. ನಮಗೆ ಮನೆಯಲ್ಲಿ ಮಾಡಲು ಅಸಾಧ್ಯವಾದರೆ ಪುರೋಹಿತರು ಮಾಡಿ ತರುವರು. ದಕ್ಷಿಣೆಯೊಂದಿಗೆ ಅದರ ರೂ. ?ಯನ್ನೂ ಕೊಡುವುದು. ಹೋಮ ಆದ ಕೂಡಲೇ ಆರತಿ ಮಾಡಿ ಸ್ವೀಕರಿಸಿ, ಪುರೋಹಿತರು ದೇವರಲ್ಲಿ ಪ್ರಾರ್ಥಿಸಿ ಹರಸಿ ಪ್ರಸಾದ ಕೊಟ್ಟ ನಂತರ ಅವರ ಆಶೀರ್ವಾದ ಪಡೆದು ಕಜ್ಜಾಯ ಸ್ವೀಕರಿಸಿ, ಹೋಮದಲ್ಲಿದ್ದ ಭಸ್ಮ (ಮಳಿ)ಯನ್ನು ಉಂಗುರ ಬೆರಳಿನಿಂದ ಹಣೆಗೆ ಹಚ್ಚುವುದು. ನಂತರ ಹೋಮದ ಐದು ಪ್ರದಕ್ಷಿಣೆ ಬಂದು ಶ್ರೀ ಗಣೇಶನನ್ನು ವಂದಿಸಿ ಸಫಲತೆಯನ್ನು ಕರುಣಿಸೆಂದು ಬೇಡಿಕೊಳ್ಳುವುದು.

**ರಾತ್ರಿ ಪೂಜೆಗೆ (ಗಣೇಶ ಹಬ್ಬದ ಸಮಯ) ರಂಗ ಪೂಜೆ :** ರಂಗ ಪೂಜೆಯನ್ನು ಹರಕೆಯಾಗಿ ಮಾಡುವ ಪದ್ಧತಿ ಉಂಟು. ಶ್ರೀ ಗಣೇಶನ ಪೂರ್ಣ ಕೃಪಾಕಟಾಕ್ಷ ಲಭಿಸುತ್ತದೆ. ಮುಖ್ಯವಾಗಿ 21 ಬಾಳೆ ಎಲೆಯಲ್ಲಿ ಅಕ್ಕಿ, ಹೊದ್ದಲು, ಕಜ್ಜಾಯ, ಬಾಳೆಹಣ್ಣು, ಎಳ್ಳುಂಡೆ, ಚಕ್ಕುಲಿ, ವೀಳ್ಯದ ಪಟ್ಟಿ-1, ಕಬ್ಬಿನ ತುಂಡು ಎಲ್ಲಾ ಒಂದೊಂದು ಇಡಬೇಕು. ಮೊದಲು ತೆಂಗಿನಕಾಯಿ-2 ಹೋಳುಗಳನ್ನು ಕಜ್ಜಾಯದ ಮೇಲೆ ಇಟ್ಟು ಅಲ್ಲಿ ಹಣತೆ (ಪ್ರೊಣ್ತೆ) ಬೆಳಗಿಸಿ ಇಡುವುದು. ಪ್ರತೀ ಬಾಳೆಎಲೆಯ ಹತ್ತಿರ ಪುರೋಹಿತರು ಪೂಜಾ ವಿಧಿ ಮಾಡಿ ಇಪ್ಪತ್ತೊಂದು ಆರತಿ ದೇವರಿಗೆ ತೋರಿಸುವುದು. ಪೂಜೆ ಆದೊಡನೆ ಪುರೋಹಿತರು ಗಣೇಶನಲ್ಲಿ ಕುಟುಂಬ ಕಲ್ಯಾಣ, ಐಕ್ಯಮತ, ಅನ್ಯೋನ್ಯತೆ, ಪ್ರೀತಿಯ ಸಹಕಾರವನ್ನು ಬೇಡಿಕೊಂಡು ಪ್ರತಿಯೊಬ್ಬರಿಗೂ ಈ ಬಾಳೆಎಲೆಯಲ್ಲಿ ಇಟ್ಟ ಪ್ರಸಾದವನ್ನು ಕೊಡುತ್ತಾರೆ. ಈ ಬಾಳೆಎಲೆಗಳಿಗೆ ಅಡ್ಡವಾಗಿ ಒಂದು ಹೊಸ ಪಾಟ್ಟೆ ತೊಡೊಪು ಹಾಕುವುದಿದೆ. ಅದನ್ನು ಪೂಜೆ ಆದ ನಂತರ ಪುರೋಹಿತರಿಗೆ ಕೊಡುವುದು. ಶ್ರೀ ಲಂಬೋಧರನಿಗೆ 5 ಆರತಿ ಮಾಡಿದ ನಂತರ ವಿಸರ್ಜನೆ ಆರತಿ ಮಾಡಿ ಬಾವಿಯಲ್ಲಿ ವಿಸರ್ಜಿಸುವ ಮೊದಲು ಮನೆಯ ಕಡೆ ವಿಘ್ನೇಶ್ವರ ಮುಖ ತೋರಿಸಿ ಆಮೇಲೆ ವಿಸರ್ಜಿಸುವುದು.

**ಗಣೇಶನ ಇಪ್ಪತ್ತೊಂದು ನಾಮಗಳು ಹೀಗಿವೆ :** ಗಜಾಸ್ಯ, ವಿಘ್ನರಾಜ, ಲಂಬೋಧರ, ಶಿವಾತ್ಮಜ, ವಕ್ರತುಂಡ, ಶೂರ್ಪಕರ್ಣ, ಕುಬ್ಜ, ವಿನಾಯಕ, ವಿಘ್ನನಾಶ, ವಿಕಟ, ವಾಮನ,

ಸರ್ವದೈವತ, ಸರ್ವಾರ್ತಿನಾಶ, ಭಗವಾನ್, ವಿಘ್ನ ಹರ್ತಾ, ಧೂಮ್ರಕ, ಸರ್ವ ದೈವಾಧಿದೇವ, ಏಕದಂತ, ಬಾಲಚಂದ್ರ, ಗಣೇಶ್ವರ, ಗಣಪ ಇಷ್ಟು ಹೆಸರು ಪಡೆದ ಗಣಪತಿ ದಯೆಯಿಂದ ನಮ್ಮ ಸಂಕಷ್ಟ ನಿವಾರಿಸಿ ನಮ್ಮ ಇಷ್ಟಾರ್ಥ ಫಲಿಸಿ ಉತ್ತರೋತ್ತರ ಕಲ್ಯಾಣವಾಗುವುದು ಖಂಡಿತ.

**ಗಣೇಶನ ಪೂಜೆ :** ಈ ಪೂಜೆಗೆ ಮುಖ್ಯವಾಗಿ ಅಪ್ಪೊ (ಗೋಧಿ ಅಥವಾ ಅಕ್ಕಿದ್ದು) ಮಾಡಬಹುದು. ಕಜ್ಜಾಯ, ಹಲವಾರು ಬಗೆಯ ಪಂಚಭಕ್ಷ್ಯ, ಕಡಬು, ಚಕ್ಕುಲಿ, ಉಂಡೆ ಮಾಡುತ್ತಾರೆ. ಪತ್ರಡೊ, ಸುಕ್ಕೆ, ಪೋಡಿ, ಗೋಡಿರಾಂದಯಿ, ಪಾತ್ತೋಳಿ, ಪೋವಾಂಖಿರಿ, ನೈವೇದ್ಯ ಮಾಡುತ್ತಾರೆ. ರಾತ್ರಿ ಪೂಜೆಯ ನಂತರ ವಿಗ್ರಹವನ್ನು ನದಿ, ಕೆರೆ ಅಥವಾ ಬಾವಿಯಲ್ಲಿ ವಿಸರ್ಜಿಸುತ್ತಾರೆ.

**ಅನಂತವ್ರತ :** ಚೌತಿ ಹಬ್ಬದ ಹತ್ತು ದಿನಗಳ ನಂತರ 'ಅನಂತವ್ರತ' ಅಥವಾ 'ನೋಪಿ ವ್ರತ' ಅನ್ನುತ್ತೇವೆ. ಶ್ರೇಷ್ಠವಾದ ಈ ವ್ರತವನ್ನು ದೇವಸ್ಥಾನದಲ್ಲಿ ಆಚರಿಸುತ್ತಾರೆ. ಇದಕ್ಕೆ ಅನಂತ ಚತುರ್ದಶಿ ಎನ್ನುತ್ತೇವೆ. ಈ ವ್ರತಕ್ಕೆ 14 ಬಗೆಯ ನೈವೇದ್ಯ ಮಾಡಬೇಕು. 14 ಬಗೆಯ ಪದಾರ್ಥ ಇದರಲ್ಲಿ ಮುಖ್ಯವಾಗಿ ಆಳ್ವತಿ ಎಂಬ ಕೇಸುವಿನ ಎಲೆಯ ಪದಾರ್ಥ ಮಾಡುವ ವಾಡಿಕೆ ಇದೆ. ಈ ಹಬ್ಬದ ಎರಡು ದಿನದ ನಂತರ ಮಹಾಲಯ ಪ್ರಾರಂಭ.

## ಮಹಾಲಯ ದಿನಗಳು :

ಮಹಾಲಯದ 15 ದಿನಗಳನ್ನು 'ಪಿತೃ ದಿನಗಳು' ಎನ್ನುತ್ತೇವೆ. ಈ 15 ದಿನಗಳಲ್ಲಿ ದೈವಾದೀನವಾದ ಚಿಕ್ಕ ಮಕ್ಕಳ ಹೆಸರಲ್ಲಿ 'ಪೋವು ವಾಡ್ತೆ' ಎಂಬ ವಿಧಾನ ಮಾಡುತ್ತೇವೆ. ಕಾಫಿ, ಫಲಾಹಾರ ಅಥವಾ ಬೆಳಿಗ್ಗೆ ಊಟ ಸಹಾ ಮಾಡಬಹುದು. ಊಟದ ನಂತರ ಮಕ್ಕಳನ್ನು ಸಾಲಾಗಿ ಕುಳ್ಳಿರಿಸಿ ಸಿಹಿ ಅವಲಕ್ಕಿ, ಕಬ್ಬು ತುಂಡು, ವೀಳ್ಯದ ಪಟ್ಟಿ, ಹೂ ತುಂಡು ಕೊಟ್ಟು ದಕ್ಷಿಣೆ ಕೊಟ್ಟ ನಂತರ ಅವರ ಕೈಯಲ್ಲಿ ಸ್ವಲ್ಪ ಅಕ್ಷತೆ ಕೊಟ್ಟು ಅದನ್ನು ತಿರುಗಿ ನಮ ಸೆರಗಿನಲ್ಲಿ ತೆಗೆದುಕೊಂಡು ನಮ್ಮ ಚಿಕ್ಕ ಮಕ್ಕಳ ತಲೆಯ ಮೇಲೆ ಹಾಕುವುದು. ಊಟ ಮಾಡುವಾಗ ನಮ್ಮ ಮನೆಯ ಮಕ್ಕಳನ್ನು (ನೂಲಮದುವೆ ಆಗದ ಮಕ್ಕಳನ್ನು) ಕುಳ್ಳಿರಿಸಬೇಕು. ಅವರೂ ಸಹ ಊಟ ಮಾಡಬೇಕು. ಹೆಣ್ಣು ಮಕ್ಕಳು ಯೌವನಕ್ಕೆ ಬಂದ ಮೇಲೆ ಮತ್ತು ಗಂಡು ಮಕ್ಕಳು ಉಪನಯನದ ನಂತರ ಈ ವಾಡಿಕೆ ಮಾಡಬಾರದು. ಕೆಲವರು ದೇವಸ್ಥಾನದಲ್ಲಿಯೇ ಇದನ್ನು ಮಾಡಿಸುತ್ತಾರೆ. ಮಾತಾಪಿತೃರ ಶ್ರಾದ್ಧವನ್ನು ನಿತ್ಯದ ತಿಥಿಯಲ್ಲಿ ಮಾಡಲು ಅಸಾಧ್ಯವಾದಾಗ ಈ ಮಾಳಾದಿನಗಳಲ್ಲಿ ಮಾಡಿದರೆ ಉತ್ತಮ. ಮಹಾಲಯ ಅಮವಾಸ್ಯೆಯ ದಿನ ಸಮುದ್ರ ಅಥವಾ ಕೆರೆಯಲ್ಲಿ ಸ್ನಾನ ಮಾಡಿ ಬ್ರಾಹ್ಮಣರಿಗೆ ವಸ್ತ್ರದಾನ, ಎಳ್ಳುದಾನ, ದಕ್ಷಿಣೆ ಕೊಟ್ಟು, ಪಿತೃರಿಗೆ ಸಂತೋಷ ಮಾಡಿದಂತಾಗಿ, ಅವರ ಋಣವನ್ನು ಸ್ವಲ್ಪವಾದರೂ ಸಲ್ಲಿಸಿದಂತಾಗುತ್ತದೆ. ಶ್ರೀಗುರು, ದೇವ, ಮಾತಾಪಿತೃರ ತಾಯ್ನಾಡಿನ ಋಣ ಎಂದೂ ತೀರಿಸಲಾಗದು.

# ನವರಾತ್ರಿ - ದಸರಾ ಹಬ್ಬ

ಶ್ರೀ ದುರ್ಗಾಮಾತೆಯನ್ನು ಪೂಜಿಸುವ ದಿನಗಳು 9, ಆದುದರಿಂದ "ನವರಾತ್ರಿ" ಎನ್ನುತ್ತೇವೆ. ಕಾರಣಾಂತರದಿಂದ 10 ದಿನಗಳೂ ಬರುತ್ತವೆ. ಕೆಲವೊಮ್ಮೆ 8 ದಿನಗಳೂ ಬರುವುದುಂಟು. ಆ ಜಗನ್ಮಾತೆಯೇ ಜಗನ್ಮೋಹಿನಿಯೇ ಸುರರನ್ನು ಹಿಂಸಿಸಿದ ಅಸುರರನ್ನು (ರಾಕ್ಷಸರನ್ನು) ದಮನಗೈದ ವೀರ ಶೌರ್ಯದ ಶ್ರೀ ದುರ್ಗಾಮಾತೆ, ಆ ಎಮ್ಮೆಯ ಮುಖವುಳ್ಳ ಮಹಿಷಾಸುರನನ್ನು ಕೊಂದು ವಧೆ ಮಾಡಿದವಳು. ಮರುದಿನ ಮಹಾನವಮಿ. "ಚಂಡಿಕಾಳಿ" ರೂಪ ಧರಿಸಿ ಚಂಡ-ಮುಂಡರನ್ನು ಸಂಹಾರ ಮಾಡಿದಳು, ಆ ದಿನ ದೇವಸ್ಥಾನಗಳಲ್ಲಿ ಮಠಗಳಲ್ಲಿ ಚಂಡಿಕಾಯಾಗ ಮಾಡುತ್ತೇವೆ. ಆ ದಿನ ಭಕ್ತಾದಿಗಳಿಗೆ ಅನ್ನ ಸಂತರ್ಪಣೆ ಮಾಡುತ್ತಾರೆ. ದೇವಿಗೆ ಮುಖ್ಯ ನೈವೇದ್ಯ "ಉಪ್ಪರಾ ಓಡೊ" ಮಾಡುತ್ತಾರೆ. 10ನೇ ದಿನ ವಿದ್ಯಾದಶಮಿ. ಆ ದಿನಕ್ಕೆ ನಾವು "ನಂವೆ ಜೆವ್ಣೆ" ಎನ್ನುತ್ತೇವೆ.

# ನಂವೆ ಜೆವ್ಣೆ

ಗದ್ದೆಯಿಂದ ಪೈರಿನ ಗೊಂಚಲು ತಂದು ತುಳಸಿ ಕಟ್ಟೆಯಲ್ಲಿಟ್ಟು ಹೂ ಇಟ್ಟು, ತೆಂಗಿನಕಾಯಿ ಒಡೆದು ನಂತರ ಆರತಿ ಮಾಡುವುದು. ಅದನ್ನು ಹರಿವಾಣದಲ್ಲಿ ಇಟ್ಟು ನೀರು ಉವಾಳಿಸಿ ದೇವರ ಕೋಣೆಯೊಳಗಿಟ್ಟು ನೈವೇದ್ಯಕ್ಕೆ ರಸಓಡೆ, ಖಿರಿ, ಸಿಹಿಪಾಯಸ, ಬೆಳ್ತಿಗೆ ಅನ್ನ ಇಟ್ಟು ಆರತಿ ಮಾಡಿ ಕುಲದೇವರ ಕಾಣಿಕೆ ಡಬ್ಬಿಯಲ್ಲಿ ಕಾಣಿಕೆ ಹಾಕುವುದು.

**ಈ ಹಬ್ಬದ ಪದಾರ್ಥ :** ಗೋಡಿರಾಂದಯಿ, ಕಾರತ್ಯಾಂಬಡ್ಯಾಗಶಿ, ತೌಶೆಉಳ್ಳೆಲ, ಆಳ್ಸಂದ್ಯಾ ಸುಕ್ಕೆ, ಮುಗಾದಾಳಿ ಗೊಡ್ಸೆ, ರಸಓಡೊ, ಊಟದ ಮೊದಲು ಮುತ್ತೈದೆಯರಿಗೆ ಮಡಿಲು (ವ್ಹಂಟಿ) ತುಂಬಿಸಿ ದಕ್ಷಿಣೆಯನ್ನು ಕೊಟ್ಟು ಆಶೀರ್ವಾದ ಪಡೆಯಬೇಕು. ಪೈರಿನ ಎಸಳುಗಳನ್ನು ಒಂದೊಂದು ಮಾವಿನ ಎಲೆಯಲ್ಲಿ ಮಡಚಿ ಬಾಳೆನಾರು ಕಟ್ಟಿ ಇದನ್ನು ದೇವರ ಕೋಣೆ, ಹಣದ ಪೆಟ್ಟಿಗೆ, ಕಪಾಟು, ತೊಟ್ಟಿಲು, ತುಳಸಿಕಟ್ಟೆಗೆ, ಬಾವಿಗೆ, ತೆಂಗಿನ ಮರಕ್ಕೆ ಕಟ್ಟಬೇಕು. ಇದಕ್ಕೆ ನಂವೆ ಬಾಂದುಚೆ ಎನ್ನುತ್ತೇವೆ. ಉಳಿದ ಪೈರನ್ನು ದೊಡ್ಡ ಕಟ್ಟು ಮಾಡಿ ಮನೆಯ ಎದುರು ಮಾಡಿಗೆ ಕಟ್ಟಬೇಕು.

ಊಟದ ಮೊದಲು ವ್ಯಾಸು, ಗೋಗ್ರಾಸು ಇಡಬೇಕು ಏಕಾದಶಿ ದಿನ ಶ್ರೀ ಶಾರದಾ ಮಾತೆಯನ್ನು ಮೆರವಣಿಗೆಯಲ್ಲಿ ಕೆರೆಯಲ್ಲಿ ವಿಸರ್ಜಿಸುತ್ತಾರೆ.

# ದೀಪಾವಳಿ

ವಿದ್ಯಾದಶಮಿಯಾದ 18 ದಿನ ಆಶ್ವಿಜ ಬಹುಳ ಕೃಷ್ಣ ಪಕ್ಷ, ತ್ರಯೋದಶಿ ದಿನ ದೀಪಾವಳಿ ಹಬ್ಬ. ಸಂಜೆ ಗಂಗೆಗೆ ಪೂಜೆ ಮಾಡಿ ಮಕ್ಕಳಿಂದ ವೃದ್ಧರವರೆಗೆ ತಲೆ ಸ್ನಾನ ಮಾಡುವ ವಾಡಿಕೆ.




ಆ ದಿನ ಬಚ್ಚಲು ಮನೆ ಗುಡಿಸಿ ಸ್ವಚ್ಛ ಮಾಡಿ, ನೀರಿನ ಹಂಡೆ, ತಪಲೆ, ಕೊಡಪಾನ ತಿಕ್ಕಿ ತೊಳೆದು ಚಂದ ಮಾಡಿ ಹೂ, "ಕಾರ್ಟೇನಿ ವಾಲಿ"ಯಿಂದ ಅಲಂಕರಿಸಬೇಕು. ಶೇಡಿ ಹುಡಿ ಮಾಡಿ ಅದರ ದಪ್ಪ ನೀರಿನಿಂದ ಹಂಡೆ, ಕೊಡಪಾನ ತಪಲೆಗಳಲ್ಲಿ ಚುಕ್ಕೆ ಮಾಡಬೇಕು.

**ಗಂಗೆ ಪೂಜೆ ಮಾಡುವ ವಿಧಾನ :** ಬಾವಿ ಅಥವಾ ಪೈಪಿನ ಹತ್ತಿರ ಸಂಜೆಗೆ ಸುಮಹೂರ್ತದಲ್ಲಿ ಹೂ, ಕುಂಕುಮ ಇಟ್ಟು ಹೂಮಾಲೆ, ಬಳ್ಳಿ ತುಂಡು ಬಾವಿಗೆ ಕಟ್ಟಬೇಕು. ರಾಟೆಗೆ ಎಣ್ಣೆ ಹಾಕಿ ಮುಹೂರ್ತದ ನೀರನ್ನು ಸೇದುವಾಗ ಮಕ್ಕಳಿಂದ ಬಟ್ಟಲು ಜಗಾಟೆ ಬಾರಿಸಬೇಕು. ನಂತರ ಚಿಕ್ಕಮಕ್ಕಳಿಗೆ ಎಣ್ಣೆ ಒರಸಿ ತಲೆಗೆ ಸ್ನಾನ ಮಾಡಬೇಕು. (ವರ್ಷದ ಒಳಗೆ ಇದ್ದ ಮಕ್ಕಳಿಗೆ ಸ್ನಾನ ಇಲ್ಲ) ನಡುರಾತ್ರಿ ತನಕ ಸ್ನಾನ ಮಾಡಬಹುದು. ಶ್ರೀಕೃಷ್ಣ ಪರಮಾತ್ಮನು ಬಹಳ ಪ್ರಯಾಸದಿಂದ ನರಕಾಸುರನನ್ನು ವಧೆ ಮಾಡಿ ಬಳಲಿ ಬಂದುದರಿಂದ ತಾಯಿ ದೇವಕಿ ಕೃಷ್ಣನಿಗೆ ಮೈಗೆ ಎಣ್ಣೆ ಸ್ನಾನದ ಸುಯೋಗ ಸಿಕ್ಕಿತು. ಶ್ರೀ ಕೃಷ್ಣನು ಯುದ್ಧದಲ್ಲಿ ಗೆದ್ದುದರಿಂದಲೂ ನರಕಾಸುರನನ್ನು ಕೊಂದ ನೆನಪಿಗಾಗಿ ಸಿಹಿ ಅವಲಕ್ಕಿ ಕಜ್ಜಾಯ, ಮಿಠಾಯಿ ತಿನ್ನುವ ವಾಡಿಕೆ. ಈ ದಿನ "ನರಕ ಚತುರ್ದಶಿ" ಎನ್ನುತ್ತೇವೆ.

**ಮೃಷ್ಟಾನ್ನ ಭೋಜನ :** ಪೋಡಿಗಳು, ಪಾಯಸ, ಮಕ್ಕಳ ಸ್ನಾನದ ನಂತರ ಕೆಲವು ಹಣತೆ ಹೊತ್ತಿಸಿ ಬಚ್ಚಲು ಮನೆಯ ಹತ್ತಿರ-1, ಬಾವಿ ಹತ್ತಿರ-1, ತುಳಸಿಕಟ್ಟೆಯ ಹತ್ತಿರ-1, ಕೆಲವು ಹಣತೆಗಳನ್ನು ಮನೆಯ ಮುಂದುಗಡೆಯೂ ನಾಲ್ಕು ದಿನಗಳ ತನಕ ಇಡಬೇಕು. ಅಮವಾಸ್ಯೆಯ ದಿನ "ಧನಲಕ್ಷ್ಮೀ ಪೂಜೆ". ಕಾರ್ತಿಕ ಪಾಡ್ಯ ದಿನ "ಧಾನ್ಯಲಕ್ಷ್ಮೀ ಪೂಜೆ" ಅಥವಾ "ಅಂಗಡಿಪೂಜೆ" ಎನ್ನುತ್ತೇವೆ. ಜಗನ್ಮಾತೆಯಾದ ಶ್ರೀ ಲಕ್ಷ್ಮೀಮಾತೆಯನ್ನು ಸಂಜೆಯ ವೇಳೆ ಪೂಜಿಸಿ ತಮ್ಮ ವ್ಯಾಪಾರ ಉದ್ಯೋಗಗಳ ಲೇವಾದೇವಿ ವ್ಯಾಪಾರ ಸುಗಮವಾಗಿ ಸಾಗಲೆಂದು ಪ್ರಾರ್ಥಿಸಿ, ಪುರೋಹಿತರಿಗೆ ದಕ್ಷಿಣೆ ಕೊಟ್ಟು ಆಶೀರ್ವಾದ ಪಡೆಯಬೇಕು. ಪೂಜೆಗೆ ಆಮಂತ್ರಿಸಿದ ಬಂಧುಮಿತ್ರರಿಗೆ ನೈವೇದ್ಯ ಹಂಚಿ ಮಿಠಾಯಿ ಕೊಡುವ ವಾಡಿಕೆ ಇದೆ. ಇದು ಮಕ್ಕಳ ಸಡಗರ ಸಂತಸದ ದಿನ. ಇದಾದ ನಂತರ ಏಕಾದಶಿಯ ಮರುದಿನ "ಉತ್ಥಾನದ್ವಾದಶಿ" ತುಳಸಿ ವೃಂದಾಮಾತೆಯ ಪೂಜೆ. ಆ ದಿನ ಬೆಳಿಗ್ಗೆ ಬೆಳ್ತಿಗೆ ಅನ್ನ, ಮೂಗಾಂಗಶಿ, ಏಕಪಾನ್ನಿ ಚಟ್ನಿ, ಸಂಜೆಗೆ ಸುರ್ನಳಿ ದೋಸೆ ಮಾಡುವ ವಾಡಿಕೆ. ಈ ಹಬ್ಬದ ನಂತರ ಕಾರ್ತಿಕ ಹುಣ್ಣಿಮೆ. ಮಂಜೇಶ್ವರ ಸೃಷ್ಠಿ, ಮಂಗಳೂರು ರಥೋತ್ಸವ.

## ದೇವ ಕಾರ್ಯದ ಊಟ ಮತ್ತು ಇತರ ಸಮಾರಂಭದ ಊಟದ ಕ್ರಮ

ದೇವಕಾರ್ಯದ ಊಟಕ್ಕೆ ಬಾಳೆಎಲೆಯಲ್ಲಿಯೇ ಊಟ ಮಾಡುವ ಪದ್ಧತಿ. ಬಾಳೆಎಲೆಯ ತುದಿಯು ಊಟ ಮಾಡುವವನ ಎಡ ದಿಕ್ಕಿಗೆ ಇಡಬೇಕು. ಮೊದಲು ಬಾಳೆಎಲೆಯಲ್ಲಿ ಸ್ವಲ್ಪ ನೀರನ್ನು ಸಿಂಪಡಿಸಿ ಸ್ವಚ್ಛಮಾಡಿ ಕುಡಿಯಲು ಶುದ್ಧ ನೀರು

